

ಕನ್ನಡ ವಿಶ್ವವಿದ್ಯಾಲಯ
ಹಂಪಿ

೨೦೧೦-೧೧ನೇ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# ಬೈಲುಕುಪ್ಪೆ ಟಿಬೆಟಿಯನ್ನರು - ಒಂದು ಸಾಂಸ್ಕೃತಿಕ ಅಧ್ಯಯನ


ನಿಬಂಧಕಾರರು

ಚೇತನಕುಮಾರಿ ಎಂ.ಪಿ.
ಕನ್ನಡ ಎಂ.ಫಿಲ್. ವಿದ್ಯಾರ್ಥಿನಿ (ಹಂಪಿ, ಕ.ವಿ.ವಿ)
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

ಡಾ. ಎನ್.ಮಹೇಶ್ವರಿ
ಸಹಾಯಕ ಪ್ರಾಧ್ಯಾಪಕರು
ಕನ್ನಡ ವಿಭಾಗ; ಜೆ.ಎಸ್.ಎಸ್ ಮಹಿಳಾ ಕಾಲೇಜು
ಚಾಮರಾಜನಗರ






ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

೨೦೧೦-೧೧



ಕನ್ನಡ ವಿಶ್ವವಿದ್ಯಾಲಯ

ಹಂಪಿ

೨೦೧೦–೧೧ನೇ ಸಾಲಿನ ಎಂ.ಫಿಲ್ ಪದವಿಯ ಪರೀಕ್ಷೆಗೆ ಸಂಬಂಧಿಸಿದಂತೆ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ನಿಬಂಧ

# ಬೈಲುಕುಪ್ಪೆ ಟಿಬೆಟ್ಟಿಯನ್ನರು – ಒಂದು ಸಾಂಸ್ಕೃತಿಕ ಅಧ್ಯಯನ

ನಿಬಂಧಕಾರರು

**ಚೇತನಕುಮಾರಿ.ಎಂ.ಪಿ.**

ಕನ್ನಡ ಎಂ.ಫಿಲ್. ವಿದ್ಯಾರ್ಥಿನಿ (ಹಂಪಿ, ಕ.ವಿ.ವಿ)

ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು



ಮಾರ್ಗದರ್ಶಕರು

**ಡಾ. ಎನ್.ಮಹೇಶ್ವರಿ**

ಸಹಾಯಕ ಪ್ರಾಧ್ಯಾಪಕರು

ಕನ್ನಡ ವಿಭಾಗ, ಜೆ.ಎಸ್.ಎಸ್. ಮಹಿಳಾ ಕಾಲೇಜು

ಚಾಮರಾಜನಗರ

ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

೨೦೧೦–೧೧

# ದೃಢೀಕರಣ ಪತ್ರ

೨೦೧೦-೧೧ನೇ ಸಾಲಿನಲ್ಲಿ ಕ್ರಮಸಂಖ್ಯೆ **KVTMKS/00480**ರ ಹಂಪಿ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಯ ವಿದ್ಯಾರ್ಥಿನಿಯಾದ ಚೇತನಕುಮಾರಿ.ಎಂ.ಪಿ ಅವರು ನನ್ನ ಮಾರ್ಗದರ್ಶನದಲ್ಲಿ **"ಬೈಲುಕುಪ್ಪೆ ಟಿಬೆಟ್ಟಿಯನ್ನರು – ಒಂದು ಸಾಂಸ್ಕೃತಿಕ ಅಧ್ಯಯನ"** ಎಂಬ ಶೀರ್ಷಿಕೆಯ ನಿಬಂಧವನ್ನು ಎಂ.ಫಿಲ್. ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

ಮೈಸೂರು
೩೦-೦೫-೨೦೧೧

(ಡಾ. ಎನ್.ಮಹೇಶ್ವರಿ)
ಮಾರ್ಗದರ್ಶಕರು
ಸಹಾಯಕ ಪ್ರಾಧ್ಯಾಪಕರು
ಕನ್ನಡ ವಿಭಾಗ
ಜೆ.ಎಸ್.ಎಸ್. ಮಹಿಳಾ ಕಾಲೇಜು
ಚಾಮರಾಜನಗರ

# ಅಭ್ಯರ್ಥಿಯ ಘೋಷಣಾ ಪತ್ರ

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್. ಪದವಿ ವಿದ್ಯಾರ್ಥಿನಿಯಾಗಿ ಅಧ್ಯಯನ ಮಾಡುತ್ತಿರುವ ನಾನು ಡಾ. ಎನ್.ಮಹೇಶ್ವರಿ ಅವರ ಮಾರ್ಗದರ್ಶನದಲ್ಲಿ ಎಂ.ಫಿಲ್ ಪದವಿಯ ಒಂದು ಭಾಗವಾದ ನಿಬಂಧ ರಚನೆಗೆ ಸಂಬಂಧಿಸಿದಂತೆ **"ಬೈಲುಕುಪ್ಪೆ ಟಿಬೆಟ್ಟಿಯನ್ನರು – ಒಂದು ಸಾಂಸ್ಕೃತಿಕ ಅಧ್ಯಯನ"** ಎಂಬ ವಿಷಯವನ್ನು ಆಯ್ಕೆಮಾಡಿಕೊಂಡು ಸಂಶೋಧನ ನಿಬಂಧವನ್ನು ಸಿದ್ಧಪಡಿಸಿರುತ್ತೇನೆ. ಈ ಸಂಶೋಧನಾ ನಿಬಂಧವನ್ನು ಈ ಮೊದಲು ಭಾಗಶಃವಾಗಲಿ, ಪೂರ್ಣವಾಗಿಯಾಗಲಿ ಬೇರಾವುದೇ ಪದವಿ ಅಥವಾ ಡಿಪ್ಲೋಮೋಗಳಿಗಾಗಲಿ ಒಪ್ಪಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Chethanakumari.H.P.

**ಮೈಸೂರು**
೩೦-೦೫-೨೦೧೧

**(ಚೇತನಕುಮಾರಿ.ಎಂ.ಪಿ)**
ಕ್ರಮಸಂಖ್ಯೆ **KVTMKS/00480**
ಕನ್ನಡ ಎಂ.ಫಿಲ್ ವಿದ್ಯಾರ್ಥಿನಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

# "ಬೈಲುಕುಪ್ಪೆ ಟಿಬೆಟ್ಟಿಯನ್ನರು – ಒಂದು ಸಾಂಸ್ಕೃತಿಕ ಅಧ್ಯಯನ"

## ಪರಿವಿಡಿ



*****

# ಬೈಲುಕುಪ್ಪೆ ಟಿಬೆಟಿಯನ್ನರು – ಒಂದು ಸಾಂಸ್ಕೃತಿಕ ಅಧ್ಯಯನ

ಜಾನಪದ ಕೇವಲ ಕಥೆ, ಗೀತೆ ಮಾತ್ರವಾಗಿರದೇ ಇಡೀ ಜನಸಮುದಾಯದ ಎಲ್ಲಾ ಆಚರಣೆ, ಸಂಸ್ಕೃತಿ, ಸಂಪ್ರದಾಯ, ನಂಬಿಕೆಗಳನ್ನು ಒಳಗೊಂಡಿದ್ದರಿಂದ ಜಾನಪದ ಎಂದರೆ ಕೇವಲ ಜನಪದ ಗೀತೆ ಕಥೆ ಮಾತ್ರ ಎಂಬ ಭಾವನೆ ಹೋಗಿ ಅದು ಸಮಾಜದ ವಿಶಾಲವಾದ ಅಂಗ ಉಪಾಂಗಗಳನ್ನು ಒಳಗೊಂಡಿದೆ. ಆದ್ದರಿಂದ ಇದನ್ನು ಸಂಕೀರ್ಣತೆಯೊಂದಿಗೆ ಅಧ್ಯಯನ ಮಾಡಬೇಕೆಂಬ ಪ್ರವೃತ್ತಿ ಇಂದು ವಿಶೇಷವಾಗಿ ಕಂಡುಬರುತ್ತಿದೆ.

ಸಂಸ್ಕೃತಿ ಇಡೀ ಮಾನವ ಜೀವನದ ಆಗುಹೋಗುಗಳು, ಆಚಾರವಿಚಾರಗಳನ್ನು ಅರಿಯುವ ವಿಚಾರವಾಗಿದೆ. 'ಮಾನವ ಸಂಸ್ಕೃತಿಯ ಲೋಕ ಸಾರ್ವತ್ರಿಕವಾದುದು' ಆದರೆ ಪ್ರತಿಯೊಂದು ಸ್ಥಳೀಯ ಅಥವಾ ಪ್ರಾಂತೀಯ ಸಂಸ್ಕೃತಿಯ ರೂಪ ಲಕ್ಷಣಗಳು ಅಪೂರ್ವ ಬಗೆಯವು. ಸಾಮಾನ್ಯವಾಗಿ ಮನುಷ್ಯರ ಮೂಲಭೂತ ವರ್ತನೆಗಳು ವಿಶ್ವದಾದ್ಯಂತ ಏಕರೀತಿಯಾಗಿ ಕಂಡುಬರುತ್ತದೆ. ಆದರೆ ಆ ವರ್ತನೆಗಳು ಬಗೆಗಳಲ್ಲಿ ರೀತಿನೀತಿಗಳಲ್ಲಿ ಭೌಗೋಳಿಕ ಹಾಗೂ ಸಾಮಾಜಿಕ ಕಾರಣಗಳಿಗಾಗಿ ಒಂದೊಂದು ಸಂಸ್ಕೃತಿ ಇರುವ ವ್ಯತ್ಯಾಸಗಳು ಒಡೆದು ಕಾಣಿಸುತ್ತದೆ, ಹುಟ್ಟು, ನಾಮಕರಣ, ವಿವಾಹ, ಕುಟುಂಬ, ಬಂಧುತ್ವ, ಅಂತ್ಯಕ್ರಿಯೆ ಇತ್ಯಾದಿ ಯಾವ ಜೀವನ ಚಕ್ರದ ಮುಖ್ಯ ಘಟ್ಟಗಳಲ್ಲಿ ಒಂದೊಂದು ಕಡೆಯ ಜನ ಒಂದೊಂದು ವಿಧವಾಗಿ ಆಚರಣೆ, ಸಂಪ್ರದಾಯಗಳನ್ನು ಅನುಸರಿಸುತ್ತಾರೆ, ಹಬ್ಬ, ಹರಿದಿನ, ಮಡಿ, ಮೈಲಿಗೆ, ಯಾತ್ರೆ, ಜಾತ್ರೆ, ಇಂತಹ ನೂರೆಂಟು ಸಂದರ್ಭಗಳು ಆಚರಣೆಯಲ್ಲಿ ವೈವಿಧ್ಯತೆ ಒಡೆದು ಕಾಣಿಸುತ್ತದೆ. ಈ ಬಗೆಯ ಜೀವನಕ್ರಮದ ವೈವಿಧ್ಯವನ್ನು ಸಾಂಸ್ಕೃತಿಕ ವೈವಿಧ್ಯತೆಯು ಕರೆಯುವುದು ಮಾನವನ ಆಶೋತ್ತರಗಳಿಗೆ ಸಂಸ್ಕೃತಿಯ ಅಡಿಪಾಯ ಬದುಕಿನ ಒರೆಗಲ್ಲು. ಸಮಾಜದಲ್ಲಿ ವ್ಯಕ್ತಿ ಜೀವನ ಸಂಪ್ರದಾಯಕವಾದ ಹಲವಾರು ಕಟ್ಟುಪಾಡು-ಗಳಿಗೆ ಒಳಪಟ್ಟಿರುತ್ತಾರೆ. ಈ ಕಟ್ಟುಪಾಡುಗಳ ವ್ಯಕ್ತಿ ಹುಟ್ಟಿನಿಂದ ಸಾವಿನವರೆಗೂ ಅವನ ಭಾವನೆಗಳನ್ನು ನಡವಳಿಕೆಯನ್ನು ರೂಪಿಸುತ್ತದೆ. ತನ್ನ ಜೀವನ ಅವಶ್ಯಕತೆಗಳಿಗೆ ಅನುಗುಣವಾಗಿ ತನ್ನ ಪರಿಸರದಲ್ಲಿ ದೊರೆಯುವ ವಸ್ತುಗಳನ್ನು ಮಾನವ ಯಾವ ರೀತಿಯಲ್ಲಿ ಅಳವಡಿಸಿಕೊಳ್ಳುತ್ತಾನೆ. ನಾಗರೀಕತೆಯ ಪ್ರತಿ ಹಂತಗಳಲ್ಲಿಯೂ ಹೇಗೆ ತನ್ನ ಪ್ರಭುತ್ವವನ್ನು ಸ್ಥಾಪನೆ ಮಾಡಿಕೊಂಡು ಮುಂದುರಿಯುತ್ತಿದ್ದಾನೆ ಎಂಬಲ್ಲಿ ಪ್ರಶ್ನೆಗಳು ಇಲ್ಲಿ ಮುಖ್ಯವಾಗುತ್ತವೆ. ಒಟ್ಟಾರೆ ಸಂಸ್ಕೃತಿ ಎಂಬುದು ಮಾನವರ ನಡವಳಿಕೆಯ ಒಟ್ಟು ಮೊತ್ತ. ಜೀವನಕ್ರಮಕ್ಕೆ ಇಟ್ಟ ಇನ್ನೊಂದು ಹೆಸರು.

## ಅ) ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಸರ್ವಧರ್ಮ ಸಮನ್ವಯ ಸಾಧಿಸಿರುವ ದೇಶ ಭಾರತ. ವಿವಿಧತೆಯಲ್ಲಿ ಏಕತೆಯನ್ನು ಸಾರುವ ಈ ನಮ್ಮ ಭರತಭೂಮಿ ವಿವಿಧ ರೀತಿಯ ಧರ್ಮ, ಭಾಷೆ ಹಾಗೂ ಜನಾಂಗಗಳಿಗೆ ನೆಲೆಯಾಗಿದೆ. ಆಶ್ರಯ ಬೇಡಿ ಬಂದವರಿಗೆ ಆಶ್ರಯದಾತೆಯಾಗಿದೆ. ಹೀಗೆ ಆಶ್ರಯಬೇಡಿ ಬಂದವರಲ್ಲಿ ಟಿಬೆಟ್ಟಿಯನ್ನರೂ ಒಬ್ಬರು. ಸುಮಾರು ನಾಲ್ಕುವರೆ ದಶಕದ ಅಂಚನ್ನು ಮುಟ್ಟುತ್ತಿರುವ ನಿರಾಶ್ರಿತರಾದ ಟಿಬೆಟ್ಟಿಯನ್ನರಿಗೆ ಭಾರತ ದೇಶವು ಶಾಂತಿ ಸಹಕಾರದ ಮನೋಭಾವನೆ ಮತ್ತು ಅಭಿಮಾನದಿಂದ ಕೆಲವು ಪ್ರದೇಶಗಳಲ್ಲಿ ಆಶ್ರಯ ನೀಡಿತು. ಅಂದಿನ ಪ್ರಧಾನಿಯಾಗಿದ್ದ ಪಂಡಿತ ಜವಹರಲಾಲ್‌ನೆಹರೂ ಅವರು ಪಂಚಶೀಲ ತತ್ತ್ವದನ್ವಯ ದಲೈಲಾಮ-ರೊಡಗೂಡಿ ಬಂದ ಟಿಬೆಟ್ಟಿಯನ್ನರಿಗೆ ಭಾರತದಲ್ಲಿ ಆಶ್ರಯವನ್ನು ಕೊಟ್ಟರು.

ಹೀಗೆ ಉತ್ತರಪ್ರದೇಶ, ಅರುಣಾಚಲಪ್ರದೇಶ, ಹಿಮಾಚಲಪ್ರದೇಶ, ಕರ್ನಾಟಕ ಮತ್ತು ಮಹಾರಾಷ್ಟ್ರ ಮುಂತಾದ ಕಡೆ ನೆಲೆಯಾಗಿರುವ ಇವರು ತಮ್ಮ ದೇಶದ ಸಂಸ್ಕೃತಿ, ಆಚಾರ ವಿಚಾರಗಳಿಂದ ಪ್ರಭಾವ ಬೀರುತ್ತಿದ್ದಾರೆ. ಹಾಗೆಯೇ ಕರ್ನಾಟಕದಲ್ಲಿ ಟಿಬೆಟ್ಟಿಯನ್ನರ ನಾಲ್ಕು ನಿರಾಶ್ರಿತ ಪ್ರದೇಶಗಳಿವೆ. ಮೈಸೂರು ಜಿಲ್ಲೆ ಪಿರಿಯಾಪಟ್ಟಣ ತಾಲ್ಲೂಕಿನ ಬೈಲುಕುಪ್ಪೆ, ಹುಣಸೂರು ಸಮೀಪದ ಗುರುಪು, ಕೊಳ್ಳೇಗಾಲ, ಉತ್ತರ ಕನ್ನಡ ಜಿಲ್ಲೆಯ ಮುಂಡಗೋಡದಲ್ಲಿಯೂ ಟಿಬೆಟ್ ನಿರಾಶ್ರಿತರು ನೆಲೆಸಿದ್ದಾರೆ. ಬೈಲುಕುಪ್ಪೆಯು ಉಳಿದವಕ್ಕಿಂತ ವಿಸ್ತಾರವಾದ ಪ್ರದೇಶ ಮತ್ತು ಹೆಚ್ಚು ಜನರನ್ನು ಒಳಗೊಂಡಿದೆ. ಈ ಪ್ರದೇಶವು ಮೈಸೂರು ಜಿಲ್ಲೆಯ ಪಿರಿಯಾಪಟ್ಟಣ ತಾಲ್ಲೂಕಿನಲ್ಲಿದೆ. ಕುಶಾಲನಗರ, ಪಿರಿಯಾಪಟ್ಟಣ ನಡುವೆ ಅಂದರೆ ಮೈಸೂರು ಮಡಿಕೇರಿಯ ಮುಖ್ಯ ರಸ್ತೆ ಬದಿಯಲ್ಲಿದೆ.

ಭೌಗೋಳಿಕವಾಗಿ ಈ ಪ್ರದೇಶವನ್ನು ಕೇಂದ್ರವಾಗಿಟ್ಟುಕೊಂಡು ಈ ಪ್ರದೇಶದಲ್ಲಿ ನೆಲೆಸಿರುವ ಟಿಬೆಟ್‌ಯನ್ನರ ಬದುಕಿನ ಬಗ್ಗೆ ಅಧ್ಯಯನ ನಡೆಸಿ ವಿವೇಚಿಸಲಾಗಿದೆ. ಇವರು ತಮ್ಮ ಸಂಸ್ಕೃತಿಯನ್ನು ಉಳಿಸಿ, ಬೆಳೆಸಿಕೊಂಡು ಹೋಗುತ್ತಿರುವುದರ ಬಗ್ಗೆ ಪ್ರಸ್ತಾಪಿಸಲಾಗಿದೆ. ಇವರ ಮೂಲನೆಲೆಗೂ ಇಲ್ಲಿಗೂ ಇರುವ ವ್ಯತ್ಯಾಸಗಳನ್ನು ಗುರುತಿಸಲಾಗಿದೆ. ಇವರು ಸಂಪ್ರದಾಯಗಳು, ನಂಬಿಕೆಗಳು, ಹಬ್ಬಗಳು, ಆಚರಣೆಗಳು, ವೇಷ-ಭೂಷಣಗಳು, ಧರ್ಮ, ಜನಾಂಗ, ಕಸುಬುಗಳು, ವ್ಯವಹಾರ, ರೀತಿ-ನೀತಿಗಳು, ಮಾನವೀಯ ಸಂಬಂಧಗಳು ಇದನ್ನು ಬದುಕಿನಲ್ಲಿ ಮೈಗೂಡಿಸಿಕೊಂಡು ಕ್ರಿಯಾಶೀಲ-ವಾಗಿರುವುದರ ಬಗ್ಗೆ ಅಧ್ಯಯನ ನಡೆಸಲಾಗಿದೆ.

ಪಿರಿಯಾಪಟ್ಟಣ ತಾಲ್ಲೂಕಿನ ಬೈಲುಕುಪ್ಪೆಯಲ್ಲಿ ನೆಲೆಸಿರುವ ಟಿಬೆಟ್ಟಿಯನ್ನರ ಧರ್ಮ, ಆಚಾರ-ವಿಚಾರಗಳು ಹಾಗೂ ಸಾಂಸ್ಕೃತಿಕ ಕೊಡುಗೆಗಳನ್ನು ತಿಳಿಸುವ ಉದ್ದೇಶದಿಂದ ಈ ಅಧ್ಯಯನವನ್ನು ಮಾಡಲಾಗಿದೆ. ಜಗತ್ತಿನ ಹಳೆಯ ಧರ್ಮಗಳಲ್ಲೊಂದಾದ ಬೌದ್ಧಧರ್ಮದ ಪ್ರಚಾರಕರೂ, ಅನುಯಾಯಿಗಳೂ ಆದ ಟಿಬೆಟ್ಟಿಯನ್ನರು ತಮ್ಮದೇ ಆದ ಸಂಪ್ರದಾಯಗಳನ್ನು ಒಳಗೊಂಡಿದ್ದಾರೆ. ಇವರು ಇಲ್ಲಿಗೆ ಆಶ್ರಿತರಾಗಿ ಬಂದು ಗಮನಾರ್ಹ ಸಾಧನೆ ಮಾಡಿದ್ದಾರೆ. ಅಲ್ಲದೆ ಇದರಿಂದ ಸಾಮಾಜಿಕ ಪರಿಣಾಮ, ಧಾರ್ಮಿಕ ಪರಿಣಾಮ ಹಾಗೂ ಸಾಂಸ್ಕೃತಿಕ ಪರಿಣಾಮಗಳಾಗಿವೆ. ಇಷ್ಟೇ ಅಲ್ಲದೇ ಬೈಲುಕುಪ್ಪೆ ಹಾಗೂ ಸುತ್ತಮುತ್ತಲಿನ ಜನತೆಗೆ ಹಾಗೂ ಪರಿಸರಕ್ಕೆ ಅನುಕೂಲ ಹಾಗೂ ಅನಾನುಕೂಲಗಳು ಆದದ್ದನ್ನು ಗಮನಿಸಬಹುದಾಗಿದೆ.

ಟಿಬೆಟಿಯನ್ನರು ಬೈಲುಕುಪ್ಪೆಯಲ್ಲಿ ನೆಲೆಸಿದಂತಹ ಸಂದರ್ಭದಲ್ಲಿ ಈ ಪ್ರದೇಶವು ದಟ್ಟವಾದ ಅರಣ್ಯದಿಂದ ಕೂಡಿದ್ದು ಪ್ರಸ್ತುತದಲ್ಲಿ ಇವರ ಪರಿಶ್ರಮದ ಫಲವಾಗಿ ಅರಣ್ಯಪ್ರದೇಶ ವಿಸ್ತಾರವಾದ ಕೃಷಿ ಪ್ರದೇಶವಾಗಿದೆ. ದೇಶ ಬಿಟ್ಟು ಬಂದರೂ ಇಲ್ಲಿಗೆ ಬಂದ ನಂತರ ಇವರು ಸುಂದರವಾದ ಮನೆಗಳನ್ನು ಬೌದ್ಧವಿಹಾರಗಳನ್ನು ನಿರ್ಮಿಸಿಕೊಂಡು ಈ ಪರಿಸರಕ್ಕೆ ಹೊಂದಿಕೊಂಡು ಪ್ರತಿಯೊಂದು ಕ್ಷೇತ್ರದಲ್ಲಿಯೂ ಸ್ಥಳೀಯರಿಗಿಂತ ಸುಧಾರಿತವಾದ ಬದುಕನ್ನು ನಡೆಸುತ್ತಿದ್ದಾರೆ. ಪ್ರತಿಯೊಬ್ಬರು ತಂತಮ್ಮ ಜೀವನಾವಶ್ಯಕತೆಗೆ ಅನುಕೂಲವಾಗುವಂತೆ ಸಂದರ್ಭಕ್ಕೆ ತಕ್ಕಂತೆ ಯಾವ ಕಷ್ಟದ ಕೆಲಸವನ್ನು ಬಿಡದೆ ಉದ್ಯೋಗವಾರು ತಾವೇ ಕಲ್ಪಿಸಿಕೊಂಡಿದ್ದಾರೆ. ಯಾವ ಕಷ್ಟ ಸಂಕಷ್ಟಕ್ಕೂ ಹೆದರದೆ ಕೆಲಸ ಕಾರ್ಯಗಳನ್ನು ನಿರ್ವಹಿಸುವ ಧೈರ್ಯಶಾಲಿಗಳಾಗಿದ್ದಾರೆ. ಇವರ ಈ ಸ್ವಾವಲಂಬಿತನ ಹಾಗೂ ಸ್ವಂತಿಕೆ ಅನುಕರಣೀಯವಾದುದು. ಈ ಎಲ್ಲಾ ಸಂಗತಿಗಳನ್ನು ಅಧ್ಯಯನಕ್ಕೆ ಯೋಗ್ಯವಾಗುವಂತೆ ವಿವೇಚಿಸಲಾಗಿದೆ.

ಈ ಅಧ್ಯಯನದ ವ್ಯಾಪ್ತಿ ಬೈಲುಕುಪ್ಪೆ ಟಿಬೆಟಿಯನ್ನರ ಆಗಮನದಿಂದ ಪ್ರಾರಂಭವಾಗಿ ಇಂದಿನ ಪರಿಸ್ಥಿತಿಯವರೆಗೆ ಇಲ್ಲಿ ಏಳು ಅಧ್ಯಾಯಗಳಿವೆ. ಮೊದಲನೆಯ ಅಧ್ಯಾಯದಲ್ಲಿ ಬೈಲುಕುಪ್ಪೆ ಗ್ರಾಮದ ಭೌಗೋಳಿಕ ಮತ್ತು ಐತಿಹಾಸಿಕ ಹಿನ್ನೆಲೆಯನ್ನು ಗುರುತಿಸಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಭಾರತ ಮತ್ತು ಟಿಬೆಟ್ ನಡುವಿನ ಸಾಂಸ್ಕೃತಿಕ ಮತ್ತು ಧಾರ್ಮಿಕ ಸಂಬಂಧವನ್ನು ವಿವರಿಸಲಾಗಿದೆ. ಮೂರನೆಯ ಅಧ್ಯಾಯದಲ್ಲಿ ಟಿಬೆಟ್ಟಿಯನ್ನರ ಆಗಮನದ ಇತಿಹಾಸವನ್ನು ವಿವರಿಸಲಾಗಿದೆ. ಇದರಲ್ಲಿ ಆ ಸಂದರ್ಭದಲ್ಲಿನ ಪರಿಸ್ಥಿತಿ ಸಾಮಾಜಿಕ ಸ್ಥಿತಿಯನ್ನು ತಿಳಿಯಬಹುದಾಗಿದೆ. ನಾಲ್ಕನೆಯ ಅಧ್ಯಾಯದಲ್ಲಿ ಟಿಬೆಟಿಯನ್ನರು ಬೈಲುಕುಪ್ಪೆಯನ್ನು

ಸಾಂಸ್ಕೃತಿಕವಾಗಿ ಬೆಳೆಸಿ ಜಗತ್ತಿನ ಪ್ರವಾಸ ತಾಣಗಳಲ್ಲಿ ಒಂದಾಗಿ ರೂಪಿಸಿದ ವಿವರಗಳಿವೆ. ಅಲ್ಲಿನ ಪದ್ಮಸಂಭವ ಬೌದ್ಧವಿಹಾರ ಕೇಂದ್ರ ಪ್ರಮುಖವಾದ ಆಕರ್ಷಣೀಯ ಕೇಂದ್ರವಾಗಿದೆ. ಅಲ್ಲದೆ ಇಲ್ಲಿನ ಬೌದ್ಧ ದೇವಾಲಯಗಳ ಬಗ್ಗೆ ತಿಳಿಸಲಾಗಿದೆ. ಐದನೆಯ ಅಧ್ಯಾಯದಲ್ಲಿ ಬೈಲುಕುಪ್ಪೆ ಟಿಬೆಟಿಯನ್ನರ ಧಾರ್ಮಿಕ ಆಚರಣೆ ಮತ್ತು ಸಂಪ್ರದಾಯವನ್ನು ಕುರಿತು ವಿವರಿಸಲಾಗಿದೆ. ಇದಲ್ಲದೇ ಮೊದಲನೆಯದಾಗಿ ಟಿಬೆಟ್ಟಿಯನ್ನರ ಆಚಾರ-ವಿಚಾರಗಳ ಬಗ್ಗೆ ವಿವರಿಸಲಾಗಿದೆ. ಇದು ಈ ಅಧ್ಯಯನದ ಕೇಂದ್ರಭಾಗ. ಇಲ್ಲಿ ಮುಖ್ಯವಾಗಿ ಟಿಬೆಟಿಯನ್ನರ ಸಂಪ್ರದಾಯಗಳು, ಜನನದಿಂದ ಮರಣದವರೆಗಿನ ಆಚಾರಗಳು, ಉದ್ಯೋಗ, ಆಹಾರ, ಆರೋಗ್ಯ, ಕಲ್ಯಾಣ, ಸಾವು ಮತ್ತು ಶ್ರಾದ್ಧ ಆಚರಣೆ, ಉಡುಪು ಮತ್ತು ಪವಿತ್ರ ಗ್ರಂಥಗಳ ಕುರಿತು ವಿವರವಾಗಿ ತಿಳಿಸಲಾಗಿದೆ. ಎರಡನೆಯದಾಗಿ ಬೈಲುಕುಪ್ಪೆ ಟಿಬೆಟ್ಟಿಯನ್ನರ ಊಟೋಪಚಾರ ವಿಧಾನದ ಬಗ್ಗೆ ವಿವರಿಸಲಾಗಿದೆ. ಮೂರನೆಯದಾಗಿ ಬೈಲುಕುಪ್ಪೆ ಟಿಬೆಟಿಯನ್ನರ ಉಡುಗೆ-ತೊಡುಗೆ ಅವರ ಸಂಪ್ರದಾಯವನ್ನು ವಿವರಿಸಲಾಗಿದೆ. ನಾಲ್ಕನೆಯದಾಗಿ ಟಿಬೆಟಿಯನ್ನರ ಧಾರ್ಮಿಕ ವಿಚಾರಗಳನ್ನು ಕುರಿತು ತಿಳಿಸಲಾಗಿದೆ. ಇದರಲ್ಲಿ ಅವರ ಧಾರ್ಮಿಕ ಪಂಗಡಗಳು ಹಾಗೂ ಬಾನ್ ಸಂಪ್ರದಾಯದ ಬಗ್ಗೆ ವಿವರಿಸಲಾಗಿದೆ. ಐದನೆಯದಾಗಿ ಟಿಬೆಟಿಯನ್ನರು ಆಚರಿಸುವ ಹಬ್ಬಗಳು ಮತ್ತು ವಿಶೇಷ ದಿನಗಳ ಬಗ್ಗೆ ಪ್ರಸ್ತಾಪಿಸಲಾಗಿದೆ. ಅವುಗಳಲ್ಲಿ ಕಬ್ಸೆ ಅಥವಾ ಲೋಸರ್ ಎಂಬ ಹಬ್ಬ ಪ್ರಸಿದ್ಧವಾದವು.

ಆರನೆಯ ಅಧ್ಯಾಯದಲ್ಲಿ ಟಿಬೆಟಿಯನ್ನರ ಭಾಷೆ ಮತ್ತು ಲಿಪಿ ಹಾಗೂ ಅವರ ಇಂದಿನ ಪರಿಸ್ಥಿತಿಯನ್ನು ಕುರಿತು ತಿಳಿಸಲಾಗಿದೆ. ಈ ಎಲ್ಲಾ ಅಂಶಗಳನ್ನು ಒಳಗೊಂಡ ಟಿಬೆಟಿಯನ್ನರ ಅಧ್ಯಯನವನ್ನು ಒಟ್ಟಾರೆಯಾಗಿ ಏಳನೆಯ ಅಧ್ಯಾಯ ಉಪಸಂಹಾರದಲ್ಲಿ ತಿಳಿಸಲಾಗಿದೆ. ಹಾಗೆಯೇ ಅನುಬಂಧವನ್ನು ಬಳಸಲಾಗಿದೆ.

ಹೀಗೆ ಸವಿಸ್ತಾರವಾದ ವಿವರಗಳನ್ನು ಒಳಗೊಂಡ ನಿರಾಶ್ರಿತ ಬದುಕಿನಿಂದ ಪುನರ್ವಸತಿ ಕೇಂದ್ರಗಳ ಮೂಲಕ ಜನಮನ್ನಣೆ ಪಡೆದು ಜನಪ್ರಿಯರಾದ ಟಿಬೆಟಿಯನ್ನರನ್ನು ಕುರಿತು ಈ ಅಧ್ಯಯನದಲ್ಲಿ ವಿವರಿಸಲಾಗಿದೆ.

# ಅಧ್ಯಾಯ – ೧

# ಬೈಲುಕುಪ್ಪೆ ಗ್ರಾಮದ ಭೌಗೋಳಿಕ ಮತ್ತು ಐತಿಹಾಸಿಕ ಹಿನ್ನೆಲೆ

ಬೈಲುಕುಪ್ಪೆ ಗ್ರಾಮದ ಭೌಗೋಳಿಕ ಹಿನ್ನೆಲೆ: ಮೈಸೂರು ಜಿಲ್ಲೆಯ ಪಿರಿಯಾಪಟ್ಟಣದಿಂದ ಕುಶಾಲನಗರಕ್ಕೆ ಹೋಗುವ ಮಾರ್ಗದಲ್ಲಿ ೬ ಕಿ.ಮೀ ದೂರದಲ್ಲಿ 'ಬೈಲುಕುಪ್ಪೆ' ಎಂಬ ಊರಿದೆ. ಇದು ಮೈಸೂರು, ಮಂಗಳೂರು ಹೆದ್ದಾರಿಯಲ್ಲಿ ಇದ್ದು, ಅಲ್ಲಿಂದ ಬಲಭಾಗಕ್ಕೆ ಟಿಬೆಟ್‌ನವರ ಪುನರ್ವಸತಿ ಕೇಂದ್ರವಿದೆ. ಇಲ್ಲಿ ಬಣ್ಣ ಹಾಗೂ ಆಳತನದಲ್ಲಿ ವಿಶೇಷ ದೈಹಿಕ ಲಕ್ಷಣಗಳುಳ್ಳ ಜನರನ್ನು ಕಾಣುತ್ತೇವೆ. ಅವರೇ ಟಿಬೆಟಿನವರು. ೧೯೬೦ರಲ್ಲಿ ಚೀನೀಯರ ದುರಾಕ್ರಮಣದಿಂದ ಮನೆ ಮಠ ಕಳೆದುಕೊಂಡು ಟಿಬೆಟಿನಿಂದ ಆಶ್ರಯಬೇಡಿ ಬಂದಾಗ ಅಂದಿನ ಪ್ರಧಾನಿ ದಿವಂಗತ ಪಂಡಿತ ಜವಹರಲಾಲ್ ನೆಹರೂ ಅವರ ಸಲಹೆಯ ಮೇರೆಗೆ ಆ ದಿನ ಮೈಸೂರು ರಾಜ್ಯದ ಮುಖ್ಯಮಂತ್ರಿಯಾಗಿದ್ದ ದಿವಂಗತ ಎಸ್.ನಿಜಲಿಂಗಪ್ಪನವರು ವಿಶಾಲವಾದ ಆ ಗೊಂಡಾರಣ್ಯವನ್ನು ಪುನರ್ವಸತಿ ಕೇಂದ್ರದ ಸ್ಥಾಪನೆಗೆ ಆಯ್ಕೆ ಮಾಡಿದರು. ಹೀಗೆ ಇಲ್ಲಿನ ವಿಶಾಲವಾದ ೨೦೦೦ ಹೆಕ್ಟೇರ್ ಭೂ ಪ್ರದೇಶದಲ್ಲಿ ಟಿಬೆಟಿನವರ ಪುನರ್ವಸತಿ ಕೇಂದ್ರಗಳು ತಲೆಯೆತ್ತಿತ್ತು.[೧]

ಬೈಲುಕುಪ್ಪೆಯು ಪಿರಿಯಾಪಟ್ಟಣ ತಾಲ್ಲೂಕಿನ ಪಶ್ಚಿಮ ಭಾಗದಲ್ಲಿದ್ದು ಕೊಡಗು ಜಿಲ್ಲೆಯ ಗಡಿಗೆ ಹೊಂದಿಕೊಂಡಂತಿದೆ. ಇಲ್ಲಿ ದಕ್ಷಿಣ ಭಾರತದ ಪವಿತ್ರ ಕಾಲುವೇ ನದಿಯು ಹರಿಯುತ್ತಿದೆ. ಈ ನದಿಯಲ್ಲಿ ಮೈಸೂರು ಜಿಲ್ಲೆ ಮತ್ತು ಕೊಡಗು ಜಿಲ್ಲೆಯನ್ನು ಬೇರ್ಪಡಿಸುವ ರೀತಿಯಲ್ಲಿ ಹಾದು ಹೋಗಿದೆ. ಈ ಸ್ಥಳವು ಮೈಸೂರು ಮತ್ತು ತಾಲ್ಲೂಕು ಕೇಂದ್ರ ಪಿರಿಯಾಪಟ್ಟಣಕ್ಕಿಂತ, ಕೊಡಗು ಜಿಲ್ಲೆಯ ಸೋಮವಾರಪೇಟೆ ತಾಲ್ಲೂಕಿನ ಕುಶಾಲನಗರವು ಬೈಲುಕುಪ್ಪೆಗೆ ಹೆಚ್ಚು ಸಂಪರ್ಕವನ್ನು ಹೊಂದಿದೆ. ಬೈಲುಕುಪ್ಪೆಯು ಕುಶಾಲನಗರಕ್ಕೆ ೩ ಕಿ.ಮೀ. ದೂರದಲ್ಲಿದೆ. ಪಿರಿಯಾಪಟ್ಟಣ ೧೫ ಕಿ.ಮೀ. ದೂರದಲ್ಲಿದೆ. ಮೈಸೂರು ೮೫ ಕಿ.ಮೀ ದೂರವಿದೆ. ಹಾಗೆಯೇ ಮಡಿಕೇರಿ ೩೫ ಕಿ.ಮೀ. ದೂರದಲ್ಲಿದೆ.

ಬೈಲುಕುಪ್ಪೆ ಟಿಬೆಟಿಯನ್ನರ ಪುನರ್ವಸತಿ ತಾಣವಾಗಿದೆ.[೨] ಪ್ರಸ್ತುತದಲ್ಲಿ ಈ ಪ್ರದೇಶವು ಒಂದು ಪುಟ್ಟ ಟಿಬೆಟ್ ದೇಶದಂತೆ ಕಂಗೊಳಿಸುತ್ತಿದೆ. ನಾಲ್ಕುವರೆ

---

೧. ಶಿವಸಂಪದ : ಸಂ. ಡಾ. ಪಿ.ಕೆ.ರಾಜಶೇಖರ, ಪು. ೧೮.

೨. ಬೈಲುಕುಪ್ಪೆ ಟಿಬೆಟಿಯನ್ನರ ಒಂದು ಸಾಂಸ್ಕೃತಿಕ ಅಧ್ಯಯನ : ಎನ್.ಆರ್.ಚಂದ್ರೇಗೌಡ, ಪು. ೫೨.

ದಶಕಗಳನ್ನು ದಾಟಿರುವ ಇವರು ಸ್ಥಳೀಯ ಜನರಿಗಿಂತ ವಿಭಿನ್ನವಾದ ರೀತಿಯಲ್ಲಿ ಬದುಕುತ್ತಿರುವುದು ನಿಜವಾಗಿಯೂ ಪ್ರಶಂಸನೀಯವಾಗಿದೆ. ೧೯೫೯ರಲ್ಲಿ ಟಿಬೆಟ್ ದೇಶವು ಚೀನಾದವರ ದಾಳಿಗೆ ತುತ್ತಾಯಿತು. ಇದರ ಪರಿಣಾಮ ಟಿಬೆಟಿಯನ್ನರು ದೇಶಾದ್ಯಂತ ಚದುರಿಹೋದರು. ಅಂತಹ ಸಂದರ್ಭದಲ್ಲಿ ಬಹುಪಾಲು ಟಿಬೆಟಿಯನ್ನರು ಭಾರತದಲ್ಲಿ ಆಶ್ರಯ ಕೋರಿ ಮೊರೆಹೋದರು. ಭಾರತ ಸರ್ಕಾರವು ಸಹಕಾರದ ಮನೋಭಾವನೆ ಮತ್ತು ಅಭಿಮಾನದಿಂದ ಆಶ್ರಯ ನೀಡಿತು. ಇದರಿಂದ ಚೀನಾ ದೇಶದ ಕೋಪಕ್ಕೂ ತುತ್ತಾಯಿತು. "ಹಸಿದವರಿಗೆ ಊಟ ಕೊಡುವುದೇ ಧರ್ಮ"[೧]ವೆಂಬಂತೆ ನೆಲೆಯಿಲ್ಲದವರಿಗೆ ಆಶ್ರಯ ನೀಡಿ ಎಲ್ಲಾ ರೀತಿಯ ಸೌಕರ್ಯವನ್ನು ಭಾರತ ಸರ್ಕಾರ ನೀಡಿತು. ಇದು ಭಾರತ ದೇಶದ ಮಾನವೀಯತೆಯನ್ನು ಎತ್ತಿ ತೋರಿಸುತ್ತದೆ.

ಪ್ರಾರಂಭದಲ್ಲಿ ಕೇವಲ ೬ ಬೌದ್ಧವಿಹಾರ ಕೇಂದ್ರಗಳು ಇದ್ದು ಕ್ರಮೇಣ ಬೆಳವಣಿಗೆ ಹೊಂದಿ ಈಗ ೨೨ ಶಿಬಿರಗಳಾಗಿವೆ. ಬೈಲುಕುಪ್ಪೆ ಪುನರ್ವಸತಿ ಪ್ರದೇಶದಲ್ಲಿ ಒಟ್ಟು ಎರಡು ತಂಗುದಾಣಗಳಿವೆ. ಒಂದನ್ನು ಹಳೆಯ ಶಿಬಿರ ಎಂದು ಇನ್ನೊಂದನ್ನು ಹೊಸ ಶಿಬಿರ ಎಂದು ಕರೆಯುತ್ತಾರೆ. ಹಳೆಯ ಪುನರ್ವಸತಿ ಕೇಂದ್ರವನ್ನು ಟಿಬೆಟ್‌ನ ಭಾಷೆಯಲ್ಲಿ 'ಲಗ್‌ಸಂಗ್ ಸಮ್‌ಡುಬ್ಲಿಂಗ್' ಎಂದೂ ಕರೆಯುತ್ತಾರೆ. ಇದರರ್ಥ ಜಾತ್ಯಾತೀತ ಮತ್ತು ಧಾರ್ಮಿಕ ಪದ್ಧತಿಗಳೆರಡರ ಒಕ್ಕೂಟ ೧೪ನೇ ದಲೈಲಾಮರು ಈ ನಾಮಕರಣ ಮಾಡಿರುತ್ತಾರೆ.[೨] ಹಳೆಯ ಪುನರ್ವಸತಿ ಕೇಂದ್ರದಲ್ಲಿ ಒಟ್ಟಾರೆ ೭ ಗ್ರಾಮಗಳಿದ್ದು ೧೧,೦೦೦ ಜನಸಂಖ್ಯೆಯಿದೆ. ಸೆರಾ, ನಿಂಗ್ಮಾ, ಸಖ್ಯಾಪ ಮತ್ತು ತಿಕ್‌ಚಂಗ್ಲಂಗ್ ಎಂಬ ೪ ಬೌದ್ಧ ವಿಹಾರಗಳಿವೆ.

ಹೊಸ ಪುನರ್ವಸತಿ ಕೇಂದ್ರದಲ್ಲಿ ೧೫ ಗ್ರಾಮಗಳಿದ್ದು, ನಾಲ್ಕು ಸಾವಿರದ ಐನೂರು(೪,೫೦೦) ಜನಸಂಖ್ಯೆಯನ್ನು ಒಳಗೊಂಡಿದೆ. ತಶಿಲುಂಪೋ ಮತ್ತು ಕಗ್ಯುಪ ಎಂಬ ೨ ಬೌದ್ಧ ವಿಹಾರಗಳನ್ನು ನಿರ್ಮಿಸಲಾಗಿದೆ. ಒಟ್ಟಾರೆ ಬೈಲುಕುಪ್ಪೆ ೨ ಪುನರ್ವಸತಿ ಕೇಂದ್ರಗಳನ್ನು ಹೊಂದಿದ್ದು, ೨೨ ಗ್ರಾಮಗಳಲ್ಲಿ ಒಟ್ಟು ಟಿಬೆಟ್ ಜನಸಂಖ್ಯೆ ೧೫,೫೦೦ (ಹದಿನೈದು ಸಾವಿರದ ಐನೂರು) ಇರುತ್ತದೆ.

ಟಿಬೆಟಿಯನ್ನುರು ನಿರಾಶ್ರಿತರಾಗಿ ಬಂದಾಗ ಕೇಂದ್ರಸರ್ಕಾರ ಅವರ ನೆರವಿಗೆ ಧಾವಿಸಿ ತಲೆಗೊಂದು ಎಕರೆ ಜಮೀನು ಒಂದು ಜೊತೆ ಎತ್ತು ಹಾಗೂ ಒಂದೊಂದು

---

೧. ಶಿವಸಂಪದ : ಸಂ. ಡಾ. ಪಿ.ಕೆ.ರಾಜಶೇಖರ, ಪು. ೧೯.

೨. ಬೈಲುಕುಪ್ಪೆ ಟಿಬೆಟಿಯನ್ನರ ಒಂದು ಸಾಂಸ್ಕೃತಿಕ ಅಧ್ಯಯನ : ಎನ್.ಆ‌ರ್.ಚಂದ್ರೇಗೌಡ, ಪು. ೫೩.

ನೇಗಿಲನ್ನು ಜೀವನೋಪಾಯಕ್ಕಾಗಿ ಒದಗಿಸಿತು. ಟಿಬೆಟಿನಲ್ಲಿಯೂ ವ್ಯವಸಾಯದಲ್ಲಿ ನುರಿತಿದ್ದ ಇವರಿಗೆ ಇಲ್ಲಿನ ಹವಾಗುಣ ಮತ್ತು ವ್ಯವಸಾಯ ಪದ್ಧತಿಗೆ ಹೊಂದಿಕೊಳ್ಳುವುದು ಸಾಧ್ಯವಾಯಿತು. ಆರಂಭದಲ್ಲಿ ಇವರು ಕನ್ನಡಿಗರಿಗೆ ಅಪರಿಚಿತರಾಗಿ ಅನಾಗರೀಕರಾಗಿ ಕಂಡರೂ ದಿನಕಳೆದಂತೆ ಕನ್ನಡಿಗರೊಂದಿಗೆ ಬೆರೆತು ಹೋದರು. ಭಾರತಕ್ಕೆ ಬರುವಾಗ ತಾವು ತಂದಿದ್ದ ಅಲ್ಪಸ್ವಲ್ಪ ಚಿನ್ನದಾಭರಣಗಳನ್ನು ಅತ್ಯಂತ ಕಡಿಮೆ ಬೆಲೆಗೆ ಕಳೆದುಕೊಂಡರು. ಜೀವನ ನಿರ್ವಹಣೆಗಾಗಿ ಒಂದು ತೋಲ ಚಿನ್ನ ಹವಳಗಳನ್ನು ಕೇವಲ ಒಂದು ಮೂಟೆ (ಚೀಲ) ಗೋಧಿ, ಅಕ್ಕಿಗೆ ಮಾರಿಕೊಂಡರು. ಇದರಿಂದ ಕುಶಾಲನಗರದ ಕೆಲವು ವಣಿಕರು ಶ್ರೀಮಂತರಾದರು.[೧]

ಟಿಬೆಟ್‌ನ ಭವ್ಯ ಸಾಂಸ್ಕೃತಿಕ ಹಾಗೂ ಧಾರ್ಮಿಕ ಪರಂಪರೆಯನ್ನು ಉಳಿಸಿ ಬೆಳೆಸುವ ದೃಷ್ಟಿಯಿಂದ ವಿದೇಶಿ ನೆರವಿನೊಂದಿಗೆ ಇಲ್ಲಿ ೬ ಬೌದ್ಧವಿಹಾರಗಳನ್ನು ನಿರ್ಮಿಸಲಾಗಿದೆ.[೨] ಈ ಕೇಂದ್ರಗಳಲ್ಲಿ ಸೆರಾ ಮಠವನ್ನು ಲಾಮಾ ಶಿಬಿರದಲ್ಲಿ ನಿರ್ಮಿಸಿದ್ದು, ಇದು ನೋಡಲೆಂದು ಬರುವ ಸಂದರ್ಶಕರನ್ನು ದೂರದಿಂದಲೇ ಕೈಬೀಸಿ ಕರೆಯುವಂತೆ ಕಾಣಿಸುತ್ತದೆ. ಈ ಭವ್ಯ ಕಟ್ಟಡದ ನಿರ್ಮಾಣಕ್ಕೆ ಸಿಂಗಾಪುರದ ಒಬ್ಬರು ೩೪ಸಾವಿರ ಡಾಲರ್ ಧನ ಸಹಾಯ ಮಾಡಿದ್ದು ಇದನ್ನು ಒಟ್ಟು ೧ ಲಕ್ಷದ ೨೦ ಸಾವಿರ ರೂ.ಗಳ ವೆಚ್ಚದಲ್ಲಿ ನಿರ್ಮಿಸಲಾಗಿದೆ. ೬೦೦ ಅಡಿ ಉದ್ದ ೩೦೦ ಅಡಿ ಅಗಲವಿರುವ ಸೆರಾವಿಹಾರದಲ್ಲಿ ಏಕಕಾಲದಲ್ಲಿ ಮೂರು ಸಾವಿರದ ಐದುನೂರು ಭಿಕ್ಷುಗಳು ಪೂಜೆಗೆ ಕೂರಬಹುದು. ಲಾಮಾಶಿಬಿರದಲ್ಲಿ ಎಲ್ಲಿ ನೋಡಿದರೂ ಕಡುಕೆಂಪು ಬಣ್ಣದ ಶಾಲು ಹೊದ್ದು ಸಮವಸ್ತ್ರ ಧರಿಸಿರುವ ಲಾಮಾಗಳ ಸೈನ್ಯವನ್ನು ಕಾಣಬಹುದು. ಹೊಸದಾಗಿ ಭೇಟಿಯಿತ್ತವರಿಗೆ ಇದೇ ಟಿಬೆಟ್ ಇರಬಹುದು ಎಂದು ಭಾಸವಾಗುತ್ತದೆ. ಟಿಬೆಟ್ ದೇಶ ರಹಿತ ಸರ್ಕಾರ ಒಟ್ಟಾರೆ ೧೮೧ ಮಠಗಳನ್ನು ತೆರೆದಿದೆ. ಇದರ ೧೭ ಸಾವಿರ ಬೌದ್ಧ ಭಿಕ್ಷುಗಳು ಮತ್ತು ೬೦೦ ಭಿಕ್ಷುಣಿಯರು ಪ್ರಪಂಚದಾದ್ಯಂತ ಇದ್ದಾರೆ.[೩]

ಟಿಬೆಟಿನವರು ಧಾರ್ಮಿಕ ಕ್ಷೇತ್ರದಲ್ಲಿ ವಹಿಸಿದ್ದ ಕಾಳಜಿಯನ್ನು ವಿದ್ಯಾಭ್ಯಾಸ ಕ್ಷೇತ್ರದಲ್ಲೂ ಕಾಣುತ್ತೇವೆ. ಬೈಲುಕುಪ್ಪೆಯಲ್ಲಿ ಟಿಬೆಟ್ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಕೇಂದ್ರೀಯ ವಿದ್ಯಾಲಯ, ಟಿಬೆಟ್ ಮಕ್ಕಳ ಗ್ರಾಮ(ಶಾಲೆ) ಕಾವೇರಿ ಕಣಿವೆ ಯೋಜನೆ

---

೧. ಶಿವಸಂಪದ : ಸಂ. ಡಾ. ಪಿ.ಕೆ.ರಾಜಶೇಖರ, ಪು. ೨೦.

೨. ಬೈಲುಕುಪ್ಪೆ ಟಿಬೆಟಿಯನ್ನರ ಒಂದು ಸಾಂಸ್ಕೃತಿಕ ಅಧ್ಯಯನ : ಎನ್.ಆರ್.ಚಂದ್ರೇಗೌಡ, ಪು. ೫೪.

೩. ಶಿವಸಂಪದ : ಸಂ. ಡಾ. ಪಿ.ಕೆ.ರಾಜಶೇಖರ, ಪು. ೨೧.

ಎಂಬ ಶಾಲೆಗಳನ್ನು ತೆರೆದಿದ್ದು, ೨ ಹಿರಿಯ ಪ್ರೌಢಶಾಲೆ ಮತ್ತು ೪ ಪ್ರಾಥಮಿಕ ಶಾಲೆಗಳನ್ನು ತೆರೆಯಲಾಗಿದೆ. ಶಿಸ್ತು, ಶಾಂತಿ ಕಾಪಾಡುವ ಶ್ರದ್ಧೆ ವಹಿಸಿ ವಿದ್ಯಾದಾನ ಮಾಡುವ ನುರಿತ ಶಿಕ್ಷಕರು ವರ್ಷವಿಡೀ ಶಿಕ್ಷಣ ನೀಡುವ ದೃಶ್ಯವನ್ನು ಕಾಣುತ್ತೇವೆ. ಸೆರಾ ಮಹಾಯಾನ ಮತ್ತು ಸೆಡ್ರುಪತೆರೆ ಜೂಗೆ ನೆಮ್ ಡ್ರೋಲಿಂಗ್ ಎಂಬ ಎರಡು ವಿಶ್ವವಿದ್ಯಾನಿಲಯಗಳನ್ನು ಕೂಡ ತೆರೆಯಲಾಗಿದೆ. ಈ ಶಾಲೆ ಮತ್ತು ವಿಶ್ವವಿದ್ಯಾನಿಲಯಗಳಲ್ಲಿ ಟಿಬೆಟ್ ವಿದ್ಯಾರ್ಥಿಗಳಲ್ಲದೇ ಇತರ ವಿದ್ಯಾರ್ಥಿಗಳು ಶಿಕ್ಷಣ ಪಡೆಯುವ ಅವಕಾಶವನ್ನು ಕಲ್ಪಿಸಲಾಗಿದೆ.

ಆರೋಗ್ಯ ಪಾಲನೆಗಾಗಿ ಮತ್ತು ರೋಗಿಗಳ ಶುಶ್ರೂಷೆಗಾಗಿ ಟಿಬೆಟಿನವರಿಗೆ ಸೇರಿದ ಆರೋಗ್ಯ ಕೇಂದ್ರಗಳು ಬೈಲುಕುಪ್ಪೆಯಲ್ಲಿವೆ. ಇಲ್ಲಿ ಎಲ್ಲಾ ರೀತಿಯ ಕಾಯಿಲೆಗಳಿಗೂ ಚಿಕಿತ್ಸೆ ನೀಡಲಾಗುವುದು. ಸಾಂಪ್ರದಾಯಿಕ ಆಯುರ್ವೇದ ಔಷಧಿಯನ್ನು ಬಳಸುವ ಪದ್ಧತಿಯಿದ್ದು ಬಹುಸಂಖ್ಯಾತ ಟಿಬೆಟಿಯನ್ನರು ಈ ಔಷದಿಯನ್ನು ಉಪಯೋಗಿಸುತ್ತಾರೆ. ಭಾರತ, ನೇಪಾಳಗಳಲ್ಲಿ ೬೧ ಪ್ರಾಥಮಿಕ ಆರೋಗ್ಯಕೇಂದ್ರಗಳಿವೆ. ೩೬ ಆಯುರ್ವೇದ ವೈದ್ಯಕೀಯ ಕೇಂದ್ರಗಳಿವೆ. ಇದರ ಜೊತೆಗೆ ನಯ ನಾಜೂಕಾದ ಉಣ್ಣೆಯ ಜಮಖಾನಗಳನ್ನು ನೇಯುವ ಕರಕುಶಲ ಕೇಂದ್ರಗಳನ್ನು ಕಾಣುತ್ತೇವೆ. ಸಾಂಪ್ರದಾಯಿಕ ಚಿತ್ರಗಳನ್ನೊಳಗೊಂಡ ಜಮಖಾನ ಕಾರ್‌ಪೆಟ್‌ಗಳನ್ನು ತಯಾರಿಸಿ ಲಕ್ಷಾಂತರ ರೂ. ಹಣವನ್ನು ಗಳಿಸುವ ಉದ್ಯೋಗ ಇದಾಗಿದೆ. ಇಷ್ಟೊಂದು ವಿಶಾಲವಾಗಿ ಭವ್ಯ ಕಟ್ಟಡಗಳನ್ನೊಳಗೊಂಡ ಟಿಬೆಟ್ ನಿರಾಶ್ರಿತರ ಪುನರ್ವಸತಿ ಕೇಂದ್ರ ಬೈಲುಕುಪ್ಪೆಯು ಸಾವಿರಾರು ವಿದೇಶಿ ಪ್ರವಾಸಿಗರ ಮನ ಸೆಳೆಯುವ ಕೇಂದ್ರವಾಗಿ ಜನ್ಮ ತಾಳಿದೆ. ಅಮೇರಿಕಾ, ಇಟಲಿ, ಸ್ವಿಸ್, ಫ್ರಾನ್ಸ್, ಇಸ್ರೇಲ್, ಬ್ರಿಟನ್ ರಾಷ್ಟ್ರಗಳಿಂದ ಸಾವಿರಾರು ಜನರು ಕೊಡಗಿನ ಗಡಿಯಲ್ಲಿರುವ ಬೈಲುಕುಪ್ಪೆಯಲ್ಲಿ ಹತ್ತಾರು ದಿನ ತಂಗಿ ಹೋಗುವುದರಿಂದಾಗಿ ಕುಶಾಲನಗರವು ಶರವೇಗದಲ್ಲಿ ಬೆಳೆಯುತ್ತಿರುವ ಒಂದು ವ್ಯಾಪಾರ ಕೇಂದ್ರವಾಗಿ ಪರಿವರ್ತನೆಗೊಂಡಿದೆ. ಇದು ಇನ್ನೂ ಕೆಲವೇ ವರ್ಷಗಳಲ್ಲಿ ಕೊಡಗಿನ ರಾಜಧಾನಿ ಮಡಿಕೇರಿಯನ್ನೇ ನಾಚಿಸುವ ಬೃಹತ್ ಪಟ್ಟಣವಾಗುವುದರಲ್ಲಿ ಸಂದೇಹವೇ ಇಲ್ಲ.[೧]

**ನೆರೆಹೊರೆಯ ಹಳ್ಳಿಗಳು:**

ಬೈಲುಕುಪ್ಪೆಯು ಟಿಬೆಟಿಯನ್ನರ ಪುನರ್ವಸತಿ ತಾಣವಾಗಿದ್ದು ಇದು ಸುಮಾರು ೨೫,೦೦೦ ಎಕರೆಗಳಿಗಿಂತ ಮಿಗಿಲಾದ ಭೂಪ್ರದೇಶವನ್ನು ಒಳಗೊಂಡಿದೆ. ಈ

೧. ಶಿವಸಂಪದ : ಸಂ. ಡಾ. ಪಿ.ಕೆ.ರಾಜಶೇಖರ ಪು. ೨೨.

ಪ್ರದೇಶದ ಸುತ್ತಮುತ್ತ ಇರುವ ಹಳ್ಳಿಗಳ ಜೊತೆಗೆ ಇವರು ಸಂಪರ್ಕವನ್ನು ಇಟ್ಟುಕೊಂಡಿದ್ದಾರೆ. ಕೃಷಿಗೆ ಸಹಾಯಕವಾಗಿ ವ್ಯವಹಾರಿಕವಾಗಿ, ಕನ್ನಡಿಗರ ಜೊತೆ ಸಂಪರ್ಕ ಹೊಂದಿರುವುದು ಸುಮಾರು ನಾಲ್ಕುವರೆ ದಶಕಗಳಿಂದ ಎಂದು ತಿಳಿದುಬರುತ್ತದೆ. ಈ ಪ್ರದೇಶದ ಪಶ್ಚಿಮಕ್ಕೆ ಕಾವೇರಿ ನದಿಯು ಹರಿಯುತ್ತದೆ. ಇದು ಕುಶಾಲನಗರ ಮತ್ತು ಬೈಲುಕುಪ್ಪೆಯನ್ನು ಬೇರ್ಪಡಿಸುತ್ತದೆ. ಹಾಗೆಯೇ ಮೈಸೂರು ಮತ್ತು ಕೊಡಗು ಜಿಲ್ಲೆಯನ್ನು ಬೇರ್ಪಡಿಸುತ್ತದೆ.[೧] ಕುಶಾಲನಗರ ಬೈಲುಕುಪ್ಪೆಯ ಪಶ್ಚಿಮಕ್ಕೆ ಇದೆ. ಇವರಿಗೆ ಕುಶಾಲನಗರವು ವ್ಯವಹಾರಿಕ ಸೌಕರ್ಯಗಳಿಗೆ ಅನುಕೂಲವಾಗಿರುವುದರ ಜೊತೆಗೆ ಇವರ ಆಗಮನದಿಂದ ಪ್ರಸ್ತುತದಲ್ಲಿ ಕುಶಾಲನಗರವು ಆರ್ಥಿಕವಾಗಿ ವ್ಯವಹಾರಿಕವಾಗಿ ಇಮ್ಮಡಿಗೊಂಡಿದೆ. ಕುಶಾಲನಗರ ಮತ್ತು ಬೈಲುಕುಪ್ಪೆಯ ನಡುವೆ ಕೊಪ್ಪ ಗ್ರಾಮವೂ ಇದೆ. ಇದೂ ಕೂಡ ಒಂದು ವ್ಯವಹಾರ ಕೇಂದ್ರವೂ ಆಗಿದೆ. ಅಲ್ಲಿ ರಾಷ್ಟ್ರೀಕೃತ ಬ್ಯಾಂಕುಗಳು, ಸಹಕಾರ ಬ್ಯಾಂಕುಗಳು, ವರ್ಕ್‌ಶಾಪ್‌ಗಳು, ಅಂಗಡಿಗಳು, ಹೊಟೇಲ್‌ಗಳು ಇವೆ. ಇಲ್ಲಿ ಟಿಬೆಟಿಯನ್ನರು ವ್ಯವಹಾರಿಕವಾಗಿ ಸಂಪರ್ಕವನ್ನಿಟ್ಟುಕೊಂಡಿದ್ದಾರೆ.

ಈ ಪ್ರದೇಶದ ಉತ್ತರ ದಿಕ್ಕಿನ ಕಡೆ ದೊಡ್ಡ ಹೊನ್ನೂರು, ಚಿಕ್ಕ ಹೊನ್ನೂರು, ಮರಡಿಯೂರು, ಹಂದಿಗಡ್ಡಿ, ತಿರುಮಲಾಪುರ, ನಿಲವಾಡಿ ಎಂಬ ಚಿಕ್ಕ ಹಳ್ಳಿಗಳು ಇವೆ.[೨] ಈ ಪ್ರದೇಶದ ಪೂರ್ವಭಾಗಕ್ಕೆ ಮಂಚದೇವನಹಳ್ಳಿ, ಆಲನಹಳ್ಳಿ, ನವಿಲೂರು, ಭೂತನಹಳ್ಳಿ, ಚೌರೂರು ಹಳ್ಳಿಗಳು ಇವೆ. ಪಶ್ಚಿಮಕ್ಕೆ ಮತ್ತು ದಕ್ಷಿಣಕ್ಕೆ ನಡುವೆ ಗಿರಗೊರು, ಚಿಕ್ಕ ಹೊಸೂರು, ದೊಡ್ಡ ಹೊಸೂರು, ರಾಣಿಗೇಟ್, ಮರೂರು, ದೊಡ್ಡ ಹರವೆ ಎಂಬ ಹಳ್ಳಿಗಳು ಕಾವೇರಿ ನದಿಯ ತೀರ ಪ್ರದೇಶಕ್ಕೆ ಸುಮಾರು ನಾಲ್ಕುವರೆ ದಶಕಗಳಿಂದಲೂ ಇಲ್ಲಿ ಸಂಭವಿಸಿಲ್ಲ. ಇದರ ಜೊತೆಗೆ ಅವಿನಾಭಾವ ಸಂಬಂಧವನ್ನು ಇಟ್ಟುಕೊಂಡಿರುವುದು ಮೌಖಿಕವಾಗಿ ಅವಲೋಕಿಸಿದಾಗ ಸಾಕ್ಷೀಕರಿಸುತ್ತವೆ.

ಈ ಪ್ರದೇಶದ ದಕ್ಷಿಣಭಾಗದಲ್ಲಿ ದಟ್ಟವಾಗಿ ಹರಡಿರುವ ಅರಣ್ಯವಿದೆ. ಇದು ನಾಗರಹೊಳೆ ಅರಣ್ಯಕ್ಕೆ ಹೊಂದಿಕೊಂಡಿದೆ. ಅರಣ್ಯದಲ್ಲಿ ಬೆಲೆಬಾಳುವ ಮರಗಳು ಇವೆ. ಗೃಹ ನಿರ್ಮಾಣಕ್ಕೆ ಬೇಕಾದ ಮರಗಳು ಪೀಠೋಪಕರಣಗಳ ತಯಾರಿಕೆಗೆ ಸಾರ್ವತ್ರಿಕ ಅಗತ್ಯಗಳಿಗೆ ಬೇಕಾದ ಮರಮಟ್ಟುಗಳು ದೊರೆಯುತ್ತವೆ. ಶ್ರೀಗಂಧ, ಬೀಟೆ, ತೇಗ, ಹೊನ್ನೆ, ಮತ್ತಿ, ಬಲವಾರ, ಬೇವು ಮುಂತಾದ ವಿವಿಧ ಜಾತಿಯ ಮರಗಳು

---

೧. ಶಿವಸಂಪದ : ಸಂ. ಡಾ. ಪಿ.ಕೆ.ರಾಜಶೇಖರ, ಪು. ೨೩.

೨. ಬೈಲುಕುಪ್ಪೆ ಟಿಬೆಟಿಯನ್ನರ ಒಂದು ಸಾಂಸ್ಕೃತಿಕ ಅಧ್ಯಯನ : ಎನ್.ಆರ್.ಚಂದ್ರೇಗೌಡ, ಪು. ೫೫.

ಸಾಕಷ್ಟು ಇವೆ. ಇಲ್ಲಿಯ ಸುತ್ತಮುತ್ತಲ ಗ್ರಾಮೀಣ ರೈತಬಾಂಧವರಿಗೆ ಬೇಕಾದ ನಿತ್ಯ ಬಳಕೆಯ ವಸ್ತುಗಳು ಎಂದರೆ ಎರವಲು, ಬಿದಿರು, ಮರದ ನೇಗಿಲು, ಶ್ರಣಸೆ, ನಲ್ಲಿಕಾಯಿ, ಸೀಗೆಕಾಯಿ, ಜೇನುತುಪ್ಪ, ಅಳಲೆಕಾಯಿ, ಮೇಣ, ಬೀಡಿಎಲೆ, ಮುತ್ತುಗದ ಎಲೆ ಮುಂತಾದವು ಜನರ ಬದುಕಿಗೆ ಅನುಕೂಲವಾಗುವಂತಹವು ದೊರೆಯುತ್ತವೆ. ಮುಖ್ಯವಾಗಿ ಈ ದಟ್ಟವಾದ ಅರಣ್ಯದಲ್ಲಿ ಹುಲ್ಲು ಯಥೇಚ್ಛವಾಗಿ ಬೆಳೆಯುವುದರಿಂದ ದನಕರುಗಳ ಆಹಾರಕ್ಕೆ ಅನುಕೂಲವಾಗಿದೆ. ಪ್ರಸ್ತುತ ದನಕರುಗಳ ಸಂಖ್ಯೆ ಕಡಿಮೆಯಾಗುತ್ತಿರುವ ಸಂದರ್ಭದಲ್ಲಿ ಈ ಸುತ್ತಮುತ್ತಲಿನ ಪ್ರದೇಶದಲ್ಲಿ ಹೆಚ್ಚು ದನಕರುಗಳನ್ನು ಸಾಕುಪ್ರಾಣಿಗಳನ್ನು ಸಾಕುವುದಕ್ಕೆ ಯೋಗ್ಯವಾದ ವಾತಾವರಣ ಅನುಕೂಲವಿರುವುದರಿಂದ ಜನರು ಇದರ ಪ್ರಯೋಜನವನ್ನು ಪಡೆದಿದ್ದಾರೆ.[೧]

**ಕಾವೇರಿ ನದಿ:**

ಬೈಲುಕುಪ್ಪೆಗೆ ಕುಶಾಲನಗರವು ಸುಮಾರು ೨ ಅಥವಾ ೩ ಕಿ.ಮೀ. ದೂರದಲ್ಲಿದೆ. ಇದರ ನಡುವೆ ಕೊಪ್ಪ ಎಂಬ ಸ್ಥಳವೂ ಇದೆ. ಕುಶಾಲನಗರ ಮತ್ತು ಬೈಲುಕುಪ್ಪೆ ಇವೆರಡನ್ನು ಬೇರ್ಪಡಿಸುವುದು ಕಾವೇರಿನದಿ.[೨] ಉತ್ತರಭಾರತದಲ್ಲಿ ಗಂಗಾನದಿ ಜೀವನದಿಯಾದರೆ ದಕ್ಷಿಣ ಭಾರತದಲ್ಲಿ ಕಾವೇರಿ ಜೀವನದಿ, ಕರ್ನಾಟಕದ ನದಿ ವ್ಯವಸ್ಥೆಗಳಲ್ಲಿ ಕಾವೇರಿ ನದಿ ವ್ಯವಸ್ಥೆಯು ಅತ್ಯಂತ ಪ್ರಮುಖವಾದುದು. ಈ ನದಿಯ ಪಾವಿತ್ರ್ಯತೆ, ವ್ಯಾಪಕತೆ, ರಮಣೀಯ ಮನೋಹರತೆ, ಕೃಷಿ, ವಿದ್ಯುಚ್ಛಕ್ತಿ, ತಯಾರಿಕೆ ಇನ್ನೂ ಮುಂತಾದ ಉಪಯೋಗಗಳ ಸಮಗ್ರ ದೃಷ್ಟಿಯಿಂದ 'ದಕ್ಷಿಣಗಂಗೆ' ಎಂದು ಕರೆಯುತ್ತಾರೆ. ಈ ನದಿಯ ಉದ್ದ ೮೦೫ ಕಿ.ಮೀ. ಅದರಲ್ಲಿ ಕೇವಲ ೩೨೦ ಕಿ.ಮೀ. ಉದ್ದದ ಪಾತ್ರವು ಕರ್ನಾಟಕದಲ್ಲಿದ್ದು ಉಳಿದ ಭಾಗವು ತಮಿಳುನಾಡಿ-ನಲ್ಲಿರುವುದು. ಹೀಗಾಗಿ ಕರ್ನಾಟಕ ರಾಜ್ಯದಲ್ಲೇ ಹುಟ್ಟಿ ಹರಿದರೂ ತಮಿಳುನಾಡಿಗೆ ಹೆಚ್ಚು ಲಭ್ಯವಾಗುವುದು. ಹಾಗೆಯೇ ಕಾವೇರಿ ಜಲವಿವಾದವು ಪ್ರತೀವರ್ಷವು ತ್ರಿಶಂಕು ಸ್ಥಿತಿಗೆ ತಲುಪಿ ಈ ಎರಡು ರಾಜ್ಯಗಳ ನಡುವೆ ಆಂತರಿಕವಾಗಿ ಬಾಂದವ್ಯ ಮುರಿದು ಬಿದ್ದಿರುವುದು ಎಲ್ಲರಿಗೂ ಗೋಚರವಾದ ವಿಷಯವಾಗಿರುವುದು ಕಂಡುಬರುತ್ತದೆ.

ಈ ಕಾವೇರಿ ನದಿಯು ಕೊಡಗು ಜಿಲ್ಲೆಗೆ ಸೇರಿದ ಬ್ರಹ್ಮಗಿರಿ ಬೆಟ್ಟದ 'ತಲಕಾವೇರಿ' ಎಂಬಲ್ಲಿ ಹುಟ್ಟಿ ಕರ್ನಾಟಕ ಮತ್ತು ತಮಿಳುನಾಡುಗಳಲ್ಲಿ ಪೂರ್ವಾಭಿಮುಖವಾಗಿ ಹರಿದು ಕಾವೇರಿ ಪಟ್ಟನಂ ಎಂಬಲ್ಲಿ ಬಂಗಾಳಕೊಲ್ಲಿಯನ್ನು

೧. ಶಿವಸಂಪದ : ಸಂ. ಡಾ. ಪಿ.ಕೆ.ರಾಜಶೇಖರ, ಪು. ೨೪.

೨. ಬೈಲುಕುಪ್ಪೆ ಟಿಬೆಟಿಯನ್ನರ ಒಂದು ಸಾಂಸ್ಕೃತಿಕ ಅಧ್ಯಯನ : ಎನ್.ಆರ್.ಚಂದ್ರೇಗೌಡ, ಪು. ೫೬.

ಸೇರುತ್ತದೆ. ಈ ನದಿಗೆ ಅನೇಕ ಉಪನದಿಗಳು ಬಂದು ಸೇರುತ್ತವೆ. ಉದಾಹರಣೆಗೆ ಹೇಮಾವತಿ, ಹಾರಂಗಿ, ಲೋಕಪಾವನಿ, ಅರ್ಕಾವತಿ ಮತ್ತು ಶಿಲಷಾನದಿಗಳು ಉತ್ತರದಿಂದಲೂ ಹಾಗೂ ಲಕ್ಷಣತೀರ್ಥ ಕಪಿಲ ಸುವರ್ಣಾವತಿ, ಭವಾನಿ ಮತ್ತು ಅಮರಾವತಿ ಎಂಬುವು ದಕ್ಷಿಣದಿಂದಲೂ ಬಂದು ಸೇರುತ್ತವೆ. ಕಾವೇರಿ ನದಿಯು ಹರಿಯುವ ಮಾರ್ಗದ ಮಧ್ಯದಲ್ಲಿ ಮೂರು ಕಡೆ ದ್ವೀಪಗಳು ಮತ್ತು ಅಲ್ಲಲ್ಲಿ ತ್ವರಿತ ಪ್ರವಾಹ ಹಾಗೂ ಜಲಪಾತಗಳಿವೆ. ಶ್ರೀರಂಗಪಟ್ಟಣ ಶಿವನಸಮುದ್ರ ಮತ್ತು ಶ್ರೀರಂಗಗಳಲ್ಲಿ ಮೂರು ಕಡೆ ದ್ವೀಪಗಳು ಸೃಷ್ಟಿಯಾಗಿದೆ. ಇವು ಹಾಲಿ ಪುಣ್ಯಕ್ಷೇತ್ರಗಳು ಆಗಿದ್ದು ಅವುಗಳನ್ನು ಅನುಕ್ರಮವಾಗಿ ಆದಿರಂಗ, ಮಧ್ಯರಂಗ ಮತ್ತು ಅಂತ್ಯರಂಗವೆಂದು ಕರೆಯುವರು. ಮೊದಲೆರಡು ಕರ್ನಾಟಕದಲ್ಲಿವೆ. ಮೂರನೆಯದು ತಮಿಳುನಾಡಿನಲ್ಲಿದೆ. ಜಲಪಾತಗಳಲ್ಲಿ ಚುಂಚನಕಟ್ಟೆ, ಶಿವನಸಮುದ್ರ ಮತ್ತು ಹೊಗೇನಕಲ್ ಪ್ರಮುಖವಾದವು. ಇವು ನೋಡುಗರಿಗೆ ರಮಣೀಯವೂ ಮನೋಹರಯುಕ್ತವೂ ಆಗಿವೆ. ಹಾಗೆಯೇ ಕುಶಾಲನಗರದಲ್ಲಿ ಕಾವೇರಿನದಿಗೆ ಹೊಂದಿಕೊಂಡಂತೆ ಪ್ರವಾಸಿಗರನ್ನು ಮನಸೂರೆಗೊಳಿಸುವ ರಮಣೀಯವಾದ 'ನಿಸರ್ಗಧಾಮ'ವಿದೆ. ಈ ಸ್ಥಳಕ್ಕೆ ಟಿಬೆಟಿಯನ್ನರು ಅನೇಕ ಬಾರಿ ಭೇಟಿ ಕೊಟ್ಟು ವೀಕ್ಷಿಸುತ್ತಾರೆ. ಇಲ್ಲಿರುವ ಪ್ರಾಣಿಗಳನ್ನು ಪ್ರೀತಿಯಿಂದ ನೋಡಿ ಪ್ರಕೃತಿಯ ಚೆಲುವನ್ನು ವೀಕ್ಷಿಸುತ್ತಾರೆ.[೧]

**ಹೊನ್ನೂರು ಗುಡ್ಡ:**

ಪಿರಿಯಾಪಟ್ಟಣದಿಂದ ಕೊಡಗಿನ ಕುಶಾಲನಗರಕ್ಕೆ ಹೋಗುವ ಮಾರ್ಗದಲ್ಲಿ ಬೈಲುಕುಪ್ಪೆ ಬಳಿ ಇರುವ ಕಾಡಿನ ಮಧ್ಯೆ ಎತ್ತರವಾದ ಗುಡ್ಡವಿದೆ. ಇದನ್ನು 'ಹೊನ್ನೂರಯ್ಯನ ಗುಡ್ಡ' ಅಥವಾ 'ಹೊನ್ನೂರಪ್ಪನ ಬೆಟ್ಟ' ಎಂದು ಕರೆಯುತ್ತಾರೆ. ಬೆಟ್ಟದ ಹೊನ್ನೂರು, ತಿರುಮಲಾಪುರಗಳೆಂಬ ಸ್ಥಳೀಯ ಹಳ್ಳಿಗಳು ಮತ್ತು ಟಿಬೆಟಿಯನ್ನರ ನಿರಾಶ್ರಿತ ತಾಣಗಳಾದ ೫ ಮತ್ತು ೬ನೇ ಕ್ಯಾಂಪ್ ಪುಕ್ಯಗ ಈ ಗುಡ್ಡದ ಹತ್ತಿರದಲ್ಲಿವೆ. ನಾವು ಇಲ್ಲಿ ಗಮನಿಸಬೇಕಾದದ್ದು ೧೬ನೇ ಶತಮಾನದಲ್ಲಿ ಇದೊಂದು ದೊಡ್ಡ ಅಗ್ರಹಾರವಾಗಿತ್ತೆಂದು ತಿಳಿಯಲಾಗಿದೆ.[೨] ಹೊನ್ನೂರಯ್ಯನ ಗುಡ್ಡದ ಸುತ್ತಮುತ್ತ ಪ್ರಕೃತಿ ಸೌಂದರ್ಯ ಆಕರ್ಷಕವಾಗಿ ಕಂಗೊಳಿಸುತ್ತದೆ. ಬೆಟ್ಟದ ಮೇಲೆ ಶ್ರೀ ಶ್ರೀನಿವಾಸನ ದೇವಾಲಯವಿದೆ. ದಾನವ ರೇಶ್ಯಾ ಶ್ರೀ ಪುರಂದರದಾಸರು ದೇವರ

೧. ಶಿವಸಂಪದ : ಸಂ. ಡಾ. ಪಿ.ಕೆ.ರಾಜಶೇಖರ, ಪು. ೨೫.

೨. ಬೈಲುಕುಪ್ಪೆ ಟಿಬೆಟಿಯನ್ನರ ಒಂದು ಸಾಂಸ್ಕೃತಿಕ ಅಧ್ಯಯನ : ಎನ್.ಆರ್.ಚಂದ್ರೇಗೌಡ, ಪು. ೫೭.

ಸನ್ನಿದಿಯಲ್ಲಿ ನಿಂತು 'ಕಂಡು ಕಂಡು ನೀ ನನ್ನ ಕೈಬಿಡುವರೆ ಕೃಷ್ಣ ಪುಂಡರೀಕಾಕ್ಷ ಶ್ರೀ ಪುರುಷೋತ್ತಮ' ಎಂದು ಹಾಡಿದರೆಂದು ಕೀರ್ತನೆಯಲ್ಲಿ ಬರುವ 'ಹೊನ್ನೂರಪುರದಾನ' ಎಂಬ ಈ ಹೊನ್ನೂರು ಇರಬಹುದೆಂದು ಊಹಿಸಲಾಗಿದೆ. ಹೊನ್ನೂರಯ್ಯನಗುಡ್ಡ ಇಂದಿಗೂ ತನ್ನ ಈ ಬಗೆಯ ವೈಶಿಷ್ಟ್ಯಗಳಿಂದ ಆಕರ್ಷಿಸುತ್ತದೆ. ಇಲ್ಲಿ ಟಿಬೆಟಿಯನ್ನರು ತಮ್ಮ ವಿಶೇಷ ಹಬ್ಬ ಹರಿದಿನಗಳಲ್ಲಿ ಈ ಗುಡ್ಡದ ಮೇಲೆ ಬಣ್ಣಬಣ್ಣದ ಬಟ್ಟೆಗಳನ್ನು ಕಟ್ಟಿ ಪೂಜೆ ಪ್ರಾರ್ಥನೆಯಲ್ಲಿ ತೊಡಗಿ ಬುದ್ಧನ ಧ್ಯಾನದಲ್ಲಿ ತೊಡಗುತ್ತಾರೆ.[೧]

**ಶಾಂತಿಕೆರೆ:** ಶಾಂತಿಕೆರೆಯು ಹಳೆಯ ಎರಡನೇ ಕ್ಯಾಂಪ್ ಮತ್ತು ಮೂರನೇ ಕ್ಯಾಂಪ್ ನಡುವೆ ಇದೆ. ಒಟ್ಟು ಪುನರ್ವಸತಿ ತಾಣಗಳಿರುವ ಎಲ್ಲರಿಗೂ ಈ ಕೆರೆಯು ಅತ್ಯುಪಯುಕ್ತವಾಗಿದೆ. ಏಕೆಂದರೆ ಟಿಬೆಟಿಯನ್ನರು ಈ ಸ್ಥಳದಲ್ಲಿ ನೆಲೆಯೂರಿದ ಸಂದರ್ಭದಲ್ಲಿ ನೀರಿನ ಸೌಕರ್ಯಕ್ಕೆ ಇದು ಕೇಂದ್ರ ತಾಣವಾಗಿತ್ತು. ಕೆರೆಯ ನೀರು ಕುಡಿಯುವುದಕ್ಕೆ, ಸ್ನಾನಕ್ಕೆ, ದನಕರುಗಳು, ಪ್ರಾಣಿ-ಪಕ್ಷಿಗಳಿಗೆ ಮುಖ್ಯಧಾರವಾಗಿತ್ತು. ೧೯೬೧-೬೨ನೇ ಇಸವಿಯಲ್ಲಿ ದಲೈಲಾಮಾ ಈ ಪುನರ್ವಸತಿ ತಾಣದಲ್ಲಿರುವ ಟಿಬೆಟಿಯನ್ನರ ಪ್ರದೇಶಕ್ಕೆ ಭೇಟಿನೀಡುತ್ತಾರೆ. ಈ ಕೆರೆಗೆ ಆಗಮಿಸಿ ಇದರಿಂದ ಆಗುತ್ತಿರುವ ಜೊತೆಗೆ ಪಡೆಯುತ್ತಿರುವ ಅನುಕೂಲ ಗಮನಿಸಿ ಕೃತಜ್ಞತಾಪೂರ್ವಕವಾಗಿ ಆಶೀರ್ವದಿಸಿದ್ದರು.

**ತಾಲ್ಲೂಕು ಕೇಂದ್ರ ಪಿರಿಯಾಪಟ್ಟಣ:** ಮೈಸೂರು ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರ ಪಿರಿಯಾಪಟ್ಟಣ. ಇದು ತಾಲ್ಲೂಕಿನ ಆಡಳಿತ ಕೇಂದ್ರವಾಗಿದೆ.[೨] ಮೈಸೂರು, ಮಡಿಕೇರಿ ಮುಖ್ಯ ರಸ್ತೆಯ ಮೇಲಿರುವ ಈ ಪಟ್ಟಣ ಮೈಸೂರಿನಿಂದ ಪಶ್ಚಿಮಕ್ಕೆ ಸುಮಾರು ೬೭ ಕಿ.ಮೀ. ದೂರದಲ್ಲಿದೆ. ಹಾಗೆಯೇ ಹುಣಸೂರಿನಿಂದ ಪಶ್ಚಿಮಕ್ಕೆ ೪ ಕೀ.ಮೀ. ದೂರದಲ್ಲಿದೆ. ಹಿಂದೆ ಇದಕ್ಕೆ ಸಿಂಗಪಟ್ಟಣ ಎಂಬ ಹೆಸರಿತ್ತು. ಅಗಸ್ತ್ಯ ಮುನಿಗಳು ಇಲ್ಲಿಗೆ ಬಂದಿದ್ದರೆಂಬುದು ಸ್ಥಳ ಪುರಾಣ ಚಂಗಾಳ್ವರ ಕಾಲದಲ್ಲಿ ಇದು ಪ್ರಾಮುಖ್ಯತೆ ಗಳಿಸಿತು. ಚಂಗಾಳ್ವರ ದೊರೆ ಪಿರಿಯರಾಜ (೧೫೮೬-೯೯) ಇಲ್ಲಿ ತನ್ನ ತಂದೆ ಕಟ್ಟಿಸಿದ್ದ ಮಣ್ಣಿನ ಕೋಟೆಯನ್ನು ಕೆಡವಿ ಕಲ್ಲಿನ ಕೋಟೆಯನ್ನು ಕಟ್ಟಿಸಿದನೆಂದು, ಪಿರಿಯಾಪಟ್ಟಣ ಎಂಬ ಹೆಸರು ಬಂದಿದ್ದು ಇವನಿಂದಲೇ ಎಂದು ಹೇಳಲಾಗಿದೆ. ಸುಮಾರು ಕ್ರಿ.ಶ. ೧೯೨೫ರಲ್ಲಿ ಮೈಸೂರಿನ ದೊರೆ ಕಂಠೀರವನರಸರಾಜ ಇದನ್ನು

೧. ಶಿವಸಂಪದ : ಸಂ. ಡಾ. ಪಿ.ಕೆ.ರಾಜಶೇಖರ, ಪು. ೨೬.

೨. ಬೈಲುಕುಪ್ಪೆ ಟಿಬೆಟಿಯನ್ನರ ಒಂದು ಸಾಂಸ್ಕೃತಿಕ ಅಧ್ಯಯನ : ಎನ್.ಆರ್.ಚಂದ್ರೇಗೌಡ, ಪು. ೫೮.

ವಶಪಡಿಸಿಕೊಂಡಾಗ ವೀರರಾಜನಿಗೂ ಮೈಸೂರಿನ ದೊರೆಗಳಿಗೂ ನಡೆದ ಕದನದಲ್ಲಿ 'ಪಿರಿಯಾಪಟ್ಟಣ ಕಾಳಗ' ಎಂಬ ಜನಪದ ಕಥನ ಕಾವ್ಯ ವರ್ಣಿಸುತ್ತದೆ. ಬ್ರಿಟಿಷರು ಮತ್ತು ಟಿಪ್ಪುಸುಲ್ತಾನ ಪ್ರತ್ಯೇಕವಾಗಿ ಕೊಡಗಿನ ಮೇಲೆ ಯುದ್ಧ ಮಾಡಲು ಹೋದಾಗ ಪಿರಿಯಾಪಟ್ಟಣದಲ್ಲಿ ಇವರ ನಡುವೆ ಯುದ್ಧ ನಡೆದು ಇಲ್ಲಿಯ ಕೋಟೆ ಮತ್ತು ಕಟ್ಟಡಗಳು ನಾಶವಾದವು ಎಂಬ ವಿಷಯವಿದೆ. ಇಲ್ಲಿ ಪಿರಿಯಾಪಟ್ಟಣದಮ್ಮ, ಕನ್ನಂಬಾಡಿಯಮ್ಮ, ಕೋಟೆಮಾರಿ ಆಂಜನೇಯ, ವೈದೇಶ್ವರ, ಚನ್ನಕೇಶವ, ಮಾದೇಶ್ವರ ಮತ್ತು ವೆಂಕಟೇಶ್ವರ ದೇವಸ್ಥಾನಗಳಿವೆ. ಶಾಲಾಕಾಲೇಜುಗಳು, ಸರ್ಕಾರಿ ಕಛೇರಿಗಳು, ಆಸ್ಪತ್ರೆ, ಪುರಸಭೆಗಳು ಸಹ ಇವೆ.[೧]

ತಾಲ್ಲೂಕಿನ ವಿಸ್ತೀರ್ಣ ೮೧೫.೫ ಚ.ಕಿ.ಮೀ. ಜನರಸಂಖ್ಯೆ ೨೨,೪೦೨೨ ಪಿರಿಯಾಪಟ್ಟಣ, ಹಾರನಹಳ್ಳಿ, ಬೆಟ್ಟದಪುರ ಮತ್ತು ರಾವಂದೂರು ಹೋಬಳಿ ಕೇಂದ್ರಗಳು ತಾಲ್ಲೂಕಿನ ಪಶ್ಚಿಮ ಮತ್ತು ವಾಯವ್ಯ ಗಡಿಯಲ್ಲಿ ಹರಿಯುವ ಕಾವೇರಿ ನದಿ ಇದನ್ನು ಸೋಮವಾರಪೇಟೆ ತಾಲ್ಲೂಕಿನಿಂದ ಪ್ರತ್ಯೇಕಿಸುತ್ತದೆ. ಪಶ್ಚಿಮಘಟ್ಟಗಳ ಬುಡದಲ್ಲಿ ಹಬ್ಬಿರುವ ಪಿರಿಯಾಪಟ್ಟಣ ತಾಲ್ಲೂಕು ಸ್ಥೂಲವಾಗಿ ಪೂರ್ವದ ಕಡೆಗೆ ಇಳಿಜಾರಾಗಿದೆ. ಪಶ್ಚಿಮಭಾಗದಲ್ಲಿ ಮೂಕಲ್ಲಯ್ಯನ ಬೆಟ್ಟ ಮತ್ತು ಜೇನುಕಲ್ಲು ಬೆಟ್ಟ ಇವೆ. ಪಿರಿಯಾಪಟ್ಟಣ ಹಾಸನ ರಸ್ತೆಯ ೧೬ ಕಿ.ಮೀ.ದೂರದಲ್ಲಿರುವ ಬೆಟ್ಟದಪುರದಲ್ಲಿ ಇತಿಹಾಸ ಪ್ರಸಿದ್ಧ ಸಿಡಿಲು ಮಲ್ಲಿಕಾರ್ಜುನ ಬೆಟ್ಟವಿದೆ. ಇದರ ಎತ್ತರ ಸಮುದ್ರಮಟ್ಟದಿಂದ ೧.೩೩ ಕಿ.ಮೀ. ಇದೆ. ಇಲ್ಲಿನ ಸುಮಾರು ಶೇಕಡ ೯೦ ಭಾಗವು ಮಳೆ ಆಶ್ರಯ ಪ್ರದೇಶವಾಗಿದೆ. ಇಲ್ಲಿ ರಾಗಿ, ಮುಸುಕಿನಜೋಳ, ಹೊಣೆ, ಸಣಪ್ಪ, ಆಲೂಗಡ್ಡೆ, ಶುಂಠಿ ಪ್ರಮುಖ ಬೆಳೆಗಳಾಗಿವೆ. ಪ್ರಸ್ತುತದಲ್ಲಿ ಪ್ರಧಾನವಾಗಿ ವಾಣಿಜ್ಯ ಬೆಳೆಯಾದ ವರ್ಜೀನಿಯ ಹೊಗೆಸೊಪ್ಪನ್ನು ಬಹುಪಾಲು ಕೃಷಿಕರು ಬೆಳೆಯುತ್ತಾರೆ.

**ಐತಿಹಾಸಿಕ ಹಿನ್ನೆಲೆ:** ಏಷ್ಯಾಖಂಡದ ಮಧ್ಯಭಾಗದಲ್ಲಿ ಹಿಮಾಲಯ ಪರ್ವತದ ಮಡಿಲಿನಲ್ಲಿರುವ ದೇಶಗಳಲ್ಲಿ ಟಿಬೆಟ್ ದೇಶವು ಒಂದು. ಇದು ಭಾರತಕ್ಕೆ ಬಹು ಸಮೀಪವಾಗಿದ್ದು, ನೇಪಾಲ, ಭೂತಾನ್ ಮತ್ತು ಕಾಶ್ಮೀರಗಳ ನೆರೆಯಲ್ಲಿದೆ. ಉತ್ತರದಲ್ಲಿ ಕುನಲುನ ಮತ್ತು ತಾಂಗಲೆ ಬೆಟ್ಟ ಶ್ರೇಣಿಗಳು ದಕ್ಷಿಣದಲ್ಲಿ ಹಿಮಾಲಯ ತಪ್ಪಲೂ ಇವೆ. ಪೂರ್ವದಲ್ಲಿ ಪರ್ವತ ಶ್ರೇಣಿಗಳ ನಡುವೆ ಅನೇಕ ಕಣಿವೆಗಳಿವೆ.[೨] ಟಿಬೆಟ್‌ನ್ನು 'ಪ್ರಪಂಚದ ಮೇಲ್ಛಾವಣಿ' ಎಂದು ಕರೆಯುತ್ತಾರೆ. ಇದರ ಭೌಗೋಳಿಕ ಕ್ಷೇತ್ರ ಇಲ್ಲಿ

೧. ಶಿವಸಂಪದ : ಸಂ. ಡಾ. ಪಿ.ಕೆ.ರಾಜಶೇಖರ, ಪು. ೨೭.

೨. ಬೈಲುಕುಪ್ಪೆ ಟಿಬೆಟಿಯನ್ನರ ಒಂದು ಅಧ್ಯಯನ : ಹೆಚ್.ಎನ್.ರಾಮಕೃಷ್ಣ, ಪು. ೨೧.

ಆವರಿಸಿರುವ ಜನಸಂಖ್ಯೆಗಳೆರಡೂ ಪ್ರಾಮುಖ್ಯತೆಗಳಿಗೆ ಕಾರಣವಾಗಿದೆ. ಏಷ್ಯಾಖಂಡದ ಹಾಗೂ ಪ್ರಪಂಚದ ಸಾಂಸ್ಕೃತಿಕ ಪರಂಪರೆಯಲ್ಲಿ ಟಿಬೆಟ್‌ನ ಕೊಡುಗೆ ಬಹು ಮುಖ್ಯವಾದುದು. ಭಾರತದಲ್ಲಿ ಬೌದ್ಧಧರ್ಮವು ಜನ್ಮ ತಾಳಿ ವಿಸ್ತಾರವಾಗಿ ಹರಡಿ ಬೆಳೆದು ನಂತರ ಅವನತಿ ಹೊಂದಿತು. ಆದರೆ ಟಿಬೆಟ್ ದೇಶ ಮಾತ್ರ ಬೌದ್ಧ ಧರ್ಮವನ್ನು ಸ್ವೀಕರಿಸಿ ಸುಮಾರು ೭ನೇ ಶತಮಾನದಿಂದ ಪ್ರಸ್ತುತದವರೆಗೂ ಜೀವಂತವಾಗಿ ಕಾಪಾಡಿಕೊಂಡು ಬಂದಿರುವುದು ಸತ್ಯ. ಟಿಬೆಟಿಯನ್ನರು ಸುಮಾರು ನಾಲ್ಕು ದಶಕಗಳಿಂದ ರಾಜಕೀಯ ಮತ್ತು ಸಾಂಸ್ಕೃತಿಕ ಸಂಘರ್ಷಕ್ಕೆ ಚೀನಾದವರಿಂದ ಸಿಲುಕಿ ಗಡಿಪಾರಾದರೂ ಕೆಲವು ದೇಶಗಳಲ್ಲಿ ನಿರಾಶ್ರಿತ ದೇಶಗಳಲ್ಲೂ ಇವರು ಬೌದ್ಧಧರ್ಮವನ್ನು ಕಾಪಾಡಿಕೊಂಡು ಬೆಳೆಯುತ್ತಿದ್ದಾರೆ. ಭಾರತಕ್ಕೆ ವಲಸೆ ಬಂದಿರುವ ಇವರು ಜನಜೀವನವನ್ನು ಧಾರ್ಮಿಕ ಸಾಂಸ್ಕೃತಿಕವಾಗಿ ಬದುಕುತ್ತಿರುವ ಅಂಶಗಳನ್ನು ಮೌಖಿಕವಾಗಿ ಅವಲೋಕಿಸಿ ತಿಳಿಯಬಹುದು. ಟಿಬೆಟ್ ನೈಸರ್ಗಿಕವಾಗಿ ರೂಪ ತಳೆದು ಪ್ರಾದೇಶಿಕತೆಯನ್ನು ಮೈಗೂಡಿಸಿಕೊಂಡಿದೆ. ಒಂದು ರಾಷ್ಟ್ರ ಸಾಂಸ್ಕೃತಿಕವಾಗಿ ಮಾತ್ರವಲ್ಲದೆ ಚಾರಿತ್ರಿಕವಾಗಿ ನಿರ್ಣಾಯಕವಾದ ಪಾತ್ರವನ್ನು ನಿರ್ವಹಿಸಲು ಈ ಹಿನ್ನೆಲೆ ಕಾರಣವಾಗಿದೆ.

ಎರಡನೇ ಮಹಾಯುದ್ಧದ ಸಂದರ್ಭದಲ್ಲಿ ಹಿಬ್ಬರನು ಯಹೂದಿಗಳನ್ನು (ಜೀವ್ಯ) ಚಿತ್ರ ಹಿಂಸೆ ಮಾಡಿದ ದೇಶದಿಂದ ಹೊರದೂಡಿದಂತೆ ೧೯೪೯–೫೦ರಲ್ಲಿ ಸಮತಾವಾದ ಸರ್ಕಾರವನ್ನು ಹೊಸದಾಗಿ ಹೊಂದಿದೆ. ಚೀನಾದ ಕೆಂಪು ಸೈನ್ಯವು ಟಿಬೆಟ್‌ನ ಮೇಲೆ ಹಠಾತ್ ದಾಳಿ ನಡೆಸಿ ಮಾರಣ ಹೋಮ ನಡೆಸಿತು. ೧೯೪೫ರಿಂದ ೧೯೫೯ರ ತನಕವೂ ಮಂದಗತಿಯಲ್ಲಿ ನಡೆದ ಚೀನೀ ದೌರ್ಜನ್ಯವು ೧೯೫೯ ಮಾರ್ಚ್ ೧೦ರಂದು ರಾಷ್ಟ್ರವ್ಯಾಪಿ ಹತ್ಯಾಕಾಂಡವನ್ನು ಮಾಡಿದ್ದು. ಇದರಿಂದಾಗಿ ಉಗ್ರಶಿಕ್ಷೆ ಮತ್ತು ಕೆಂಪು ಸೈನ್ಯವು ಕ್ರೂರ ಹಿಂಸೆಯನ್ನು ತಾಳಲಾರದೆ ತಮ್ಮ ನಾಯಕ ಹಾಗೂ ಧರ್ಮಗುರುವಾದ ದಲೈಲಾಮಾರವರನ್ನು ಜೊತೆಗೂಡಿ ಹೇಸರುಕತ್ತೆ ಕುದುರೆಗಳನ್ನೇರಿ ಬಹುಸಂಖ್ಯಾತ ಟಿಬೆಟಿಯನ್ನರು ಹಿಮಾಲಯ ದಾಟಿ ಭಾರತಕ್ಕೆ ಬಂದು ನೆಲೆಸಿದರು.

೧೯೬೨ರಲ್ಲಿ ಟಿಬೆಟ್ ನಿರಾಶ್ರಿತರು ಭಾರತಕ್ಕೆ ಬಂದಾಗ ಅಂದಿನ ಭಾರತದ ಪ್ರಧಾನಿ ದಿವಂಗತ ಜವಾಹರ್‌ಲಾಲ್ ನೆಹರೂ ಅವರು ಬೈಲುಕುಪ್ಪೆಯನ್ನು ಪುನರ್ವಸತಿ ಕೇಂದ್ರವನ್ನಾಗಿ ಮಾಡಿಕೊಟ್ಟರು. ಭಾರತಸರ್ಕಾರವು ನಿರಾಶ್ರಿತ ಟಿಬೆಟಿಯನ್ನರನ್ನು ಕೆಲವು ರಾಜ್ಯಗಳಿಗೆ ಕಳುಹಿಸಿ ಪುನರ್ವಸತಿ ವ್ಯವಸ್ಥೆಯನ್ನು ಕಲ್ಪಿಸಿಕೊಟ್ಟಿತು. ಅದರಲ್ಲಿ ೧೯೬೧–೬೨ರಲ್ಲಿ ಕರ್ನಾಟಕ ರಾಜ್ಯಕ್ಕೆ ಒಂದು ಗುಂಪು ಬಂದು ನೆಲೆಯೂರಿತು.

ಅಂದಿನ ಸಂದರ್ಭದಲ್ಲಿ ಕರ್ನಾಟಕದ ಮುಖ್ಯಮಂತ್ರಿಯಾಗಿದ್ದ ಶ್ರೀ ಎಸ್.ನಿಜಲಿಂಗಪ್ಪ-ನವರು ರಾಜ್ಯದ ನಾಲ್ಕು ಸ್ಥಳಗಳಲ್ಲಿ ಪುನರ್ವಸತಿ ತಾಣವನ್ನು ಕಲ್ಪಿಸಿಕೊಟ್ಟರು. ಅವುಗಳಲ್ಲಿ ಪಿರಿಯಾಪಟ್ಟಣ ತಾಲ್ಲೂಕು ಬೈಲುಕುಪ್ಪೆ, ಹುಣಸೂರು ತಾಲ್ಲೂಕು, ಗುರುಪುರ, ಕೊಳ್ಳೇಗಾಲ ತಾಲ್ಲೂಕು ಒಡೆಯರ ಪಾಳ್ಯ ಮತ್ತು ಉತ್ತರ ಕನ್ನಡ, ಮಂಡಗೊಂಡು ಸ್ಥಳಗಳಲ್ಲಿ ನೆಲೆಸಿದ್ದಾರೆ. ಇವು ಕರ್ನಾಟಕದ ಟಿಬೆಟಿಯನ್ನರ ಪುನರ್ವಸತಿ ತಾಣವಾಗಿವೆ.[೧]

ಈ ನಾಲ್ಕು ಪ್ರದೇಶಗಳಲ್ಲಿ ಅತಿ ಹೆಚ್ಚು ಟಿಬೆಟಿಯನ್ನರು ನೆಲೆಸಿರುವ ಸ್ಥಳವೆಂದರೆ ಬೈಲುಕುಪ್ಪೆ. ಈ ಸ್ಥಳವು ವಿಸ್ತಾರವಾದ ಭೂಪ್ರದೇಶವನ್ನು ಒಳಗೊಂಡಿದೆ. ಕಾವೇರಿನದಿ ಮತ್ತು ಕೊಡಗು ಜಿಲ್ಲೆಯನ್ನು ಸುತ್ತುವರಿದಿದೆ. ಇದರ ಅಂಚಿನಲ್ಲಿ ಘೋರವಾದ ಅರಣ್ಯ ಸುತ್ತುವರಿದಿದೆ. ಆದರೆ ಈ ನಿರಾಶ್ರಿತ ಟಿಬೆಟಿಯನ್ನರು ೧೯೬೧-೬೨ರಲ್ಲಿ ಇಲ್ಲಿಗೆ ಬಂದು ನೆಲೆಯೂರಿದ ಸಂದರ್ಭದಲ್ಲಿ ಮನುಷ್ಯರು ನಿರ್ಭೀತಿಯಿಂದ ಓಡಾಡುವುದಕ್ಕೂ ಸಾಧ್ಯವಾಗುತ್ತಿರಲಿಲ್ಲ. ಏಕೆಂದರೆ ಇದು ಘೋರವಾದ ಅರಣ್ಯವಾಗಿತ್ತು. ಹುಲಿ, ಸಿಂಹ, ಚಿರತೆ, ಆನೆ ಮುಂತಾದ ಅನೇಕ ಪ್ರಾಣಿಗಳು ವಾಸಿಸುವ ನೆಲೆಯಾಗಿತ್ತು. ಸುತ್ತಲೂ ಸಣ್ಣಪುಟ್ಟ ಬೆಟ್ಟಗುಡ್ಡಗಳು ಆವೃತವಾಗಿದ್ದು ನಡುವೆ ಬಯಲು ಇತ್ತು. ಈ ಬಯಲು ಬರಿ ಬಯಲಾಗಿರಲಿಲ್ಲ. ಇಲ್ಲಿ ದಷ್ಟಪುಷ್ಟವಾದ ಮರಗಳು, ಪೊದೆಗಳು ಸುತ್ತುವರಿದಿತ್ತು. ಇಂತಹ ಒಂದು ಭಯಂಕರವಾದ ಸ್ಥಳಕ್ಕೆ ಟಿಬೆಟಿಯನ್ನರು ನೆಲೆಸುವುದಕ್ಕೆ ಕರ್ನಾಟಕ ಸರ್ಕಾರವು ಕಳುಹಿಸಿತು. ಈ ಸ್ಥಳದಲ್ಲಿ ಮೊದಲು ಬೆರಳೆಣಿಕೆಯಷ್ಟು ಕನ್ನಡಿಗರು ಮನೆಗಳು ರಸ್ತೆ ಬದಿಯಲ್ಲಿ ಇದ್ದವು. ಅಂದರೆ ಮೈಸೂರು ಮತ್ತು ಮಡಿಕೇರಿ ರಸ್ತೆ ಆ ಸಂದರ್ಭದಲ್ಲಿ ತುಂಬಾ ಕಿರಿದಾಗಿತ್ತು. ಈ ಸ್ಥಳಕ್ಕೆ ಟಿಬೆಟಿಯನ್ನರು ಪ್ರವೇಶ ಮಾಡಿದಾಗ ರಸ್ತೆ ದಟ್ಟವಾಗಿ ಹರಡಿದ್ದ ಮರಗಿಡ ಪೊದೆಗಳನ್ನು ಕಡಿದು ವಾಸಿಸುವುದಕ್ಕೆ ಗುಡಾರಗಳನ್ನು ಹಾಕಿಕೊಂಡರು. ಆನಂತರ ಸಮತಟ್ಟಾಗಿರುವ ಪ್ರದೇಶವನ್ನು ಅಲ್ಲಲ್ಲಿ ಹುಡುಕಿ ಮರಗಿಡಗಳನ್ನು ಕಡಿದು ವ್ಯವಸಾಯಕ್ಕೆ ಯೋಗ್ಯವಾದ ಪ್ರದೇಶವನ್ನು ಮಾಡಿಕೊಂಡಿತು. ಜೀವನೋಪಾಯಕ್ಕಾಗಿ ಬೇಸಾಯ ಮಾಡತೊಡಗಿದರು. ಈ ಸ್ಥಳದಲ್ಲಿ ಇವರು ಅಲ್ಲಲ್ಲೆ ಗುಡಾರಗಳನ್ನು ಹೂಡಿ ಧೈರ್ಯಗುಂದದೆ ಬದುಕತೊಡಗಿದರು. ಹಾಗೆಯೇ ವ್ಯವಸಾಯಕ್ಕೆ ಸ್ಥಳವನ್ನು ವಿಸ್ತರಿಸಿಕೊಂಡು ಹೋದರು. ಈ ಪರಿಸರಕ್ಕೆ ಹೊಂದಿಕೊಂಡು

೧. ಬೈಲುಕುಪ್ಪೆ ಟಿಬೆಟಿಯನ್ನರ ಒಂದು ಅಧ್ಯಯನ : ಹೆಚ್.ಎನ್.ರಾಮಕೃಷ್ಣ, ಪು. ೨೩.

ಬಹುಬೇಗ ಇಲ್ಲಿಯ ಜನರು ಬದುಕಿಗಿಂತ ನವೀನ ಮಾದರಿಯ ಸಲಕರಣೆಗಳನ್ನು ಅಳವಡಿಸಿಕೊಂಡು ವಿಭಿನ್ನವಾಗಿ ಬದುಕತೊಡಗಿದರು.[೧]

ಟಿಬೆಟಿಯನ್ನರು ನಿರಾಶ್ರಿತರಾಗಿ ಬಂದಾಗ ಕೇಂದ್ರ ಸರ್ಕಾರ ಅವರ ನೆರವಿಗೆ ಧಾವಿಸಿ ತಲೆಗೊಂದು ಎಕರೆ ಜಮೀನು ಒಂದು ಜೊತೆ ಎತ್ತು ಹಾಗೂ ಒಂದೊಂದು ನೇಗಿಲನ್ನು ಜೀವನೋಪಾಯಕ್ಕಾಗಿ ಒದಗಿಸಿತು. ಟಿಬೆಟಿನಲ್ಲಿಯೂ ವ್ಯವಸಾಯದಲ್ಲಿ ನುರಿತಿದ್ದ ಇವರಿಗೆ ಇಲ್ಲಿನ ಹವಾಗುಣ ಮತ್ತು ವ್ಯವಸಾಯ ಪದ್ಧತಿಗೆ ಹೊಂದಿಕೊಳ್ಳುವುದು ಸಾಧ್ಯವಾಯಿತು. ಆರಂಭದಲ್ಲಿ ಇವರು ಕನ್ನಡಿಗರಿಗೆ ಬೆರೆತು ಹೋದರು. ಭಾರತಕ್ಕೆ ಬರುವಾಗ ತಾವು ತಂದಿದ್ದ ಅಲ್ಪಸ್ವಲ್ಪ ಚಿನ್ನದಾಭರಣಗಳನ್ನು ಅತ್ಯಂತ ಕಡಿಮೆ ಬೆಲೆಗೆ ಕಳೆದುಕೊಂಡರು. ಜೀವನ ನಿರ್ವಹಣೆಗಾಗಿ ಒಂದು ತೊಲ ಚಿನ್ನ, ಹವಳಗಳನ್ನು ಕೇವಲ ಒಂದು ಮೂಟೆ(ಚೀಲ) ಗೋಧಿ, ಅಕ್ಕಿಗೆ ಮಾರಿಕೊಂಡರು. ಇದರಿಂದ ಕುಶಾಲನಗರದ ಕೆಲವು ವಣಿಕರು ಶ್ರೀಮಂತರಾದರು.

ಭಾರತದ ಕೆಲವು ಮುಖ್ಯ ಪಟ್ಟಣಗಳಲ್ಲಿ ರಸ್ತೆ ಬದಿಯಲ್ಲಿ ಸ್ವೆಟರ್, ಜೀನ್ಸ್‌ಪ್ಯಾಂಟ್, ಎಲೆಕ್ಟ್ರಾನಿಕ್ ಉಪಕರಣಗಳು ಮತ್ತು ಸುಗಂಧದ್ರವ್ಯ ಹಾಗೂ ಹಿರೋಪಿನ ಮುಂತಾದ ವಸ್ತುಗಳನ್ನು ಮಾರುತ್ತಾ ಕುಳಿತಿರುವ ಗೋಧಿ ಬಣ್ಣದ, ಚಿಕ್ಕ ಕಣ್ಣಿನ, ಚಪ್ಪಟೆಮೂಗಿನ, ದೃಢಕಾಯ ಮಟ್ಟವಾದ ಆಳುತನವನ್ನು ಹೊಂದಿರುವ ಜನರೇ ಟಿಬೆಟಿಯನ್ನರು. ಇವರು ಮೂಲತಃ ಮಂಗೋಲಿಯ ಬುಡಕಟ್ಟಿಗೆ ಸೇರಿದ ಗುಡ್ಡಗಾಡು ಪ್ರದೇಶದಲ್ಲಿ ವಾಸಿಸುವ ಜನರು. ಒರಟು ಸ್ವಭಾವದ ಧೈರ್ಯಶಾಲಿಗಳು ಸಾಧಾರಣ ರೋಗರುಜಿನಗಳಿಗೆ ಅಳುಕದ ಜಗ್ಗದ ಜನರು. ಇವರು ಪ್ರಾರಂಭದಲ್ಲಿ ಬಾನ್ ಸಂಪ್ರದಾಯವನ್ನು ಅನುಸರಿಸುತ್ತಿದ್ದು ೭ನೇ ಶತಮಾನದಿಂದೀಚೆಗೆ ಬೌದ್ಧ ಧರ್ಮವನ್ನು ಅನುಸರಿಸುತ್ತಿರುವ ಒಂದು ಜನರ ಗುಂಪಾಗಿದೆ.[೨]

ಟಿಬೆಟಿಯನ್ನರ ಆಗಮನದಿಂದ ಸಾಧಕಗಳಿಗಿಂತ ಬಾಧಕಗಳೇ ಹೆಚ್ಚಾಗಿವೆ. ಪ್ರತಿಯೊಂದು ಕಾರ್ಯಕ್ಕೂ ಕುಶಾಲನಗರದ ವಣಿಕರನ್ನು ಆಶ್ರಯಿಸಿರುವುದರಿಂದ ಆ ವಣಿಕರು ಶ್ರೀಮಂತರಾಗಿದ್ದಾರೆ. ಸಂತೆಯ ದಿನ ಪ್ರತಿಯೊಬ್ಬರು ಆಟೋದಲ್ಲಿಯೇ ಹೋಗುವುದರಿಂದ ಆಟೋದವರಿಗೆ ಲಾಭವೇ ಲಾಭ; ಟಿಬೆಟಿಯನ್ನರಿಗೆ ಚಲನಚಿತ್ರ, ವಿಡಿಯೋ ನೋಡುವ ಸಂಗೀತ ಕೇಳುವ, ರಾಗಿ ಮತ್ತು ಭತ್ತದಿಂದ ತಯಾರಿಸಿದ ಜಾಂಗನ್ನು ಸೇರಿಸುವ ಪರಿಪಾಠವಿದೆ. ಇಷ್ಟೇ ಅಲ್ಲದೇ ಇವರು ವ್ಯಾಪಾರ

೧. ಬೈಲುಕುಪ್ಪೆ ಟಿಬೆಟಿಯನ್ನರ ಒಂದು ಅಧ್ಯಯನ : ಹೆಚ್.ಎನ್.ರಾಮಕೃಷ್ಣ, ಪು. ೨೪.
೨. ಅದೇ., ಪುಟ. ೨೫.

ಮಾಡುವುದರಲ್ಲಿ ಎತ್ತಿದ ಕೈ. ಉಣ್ಣೆ ಚರ್ಮದ ಪದಾರ್ಥ ಹಾಗೂ ಎಲೆಕ್ಟ್ರಾನಿಕ್ಸ್ ವಸ್ತುಗಳನ್ನು ಲೂದಿಯಾನಾ ಮತ್ತು ದೆಹಲಿಯ ಸಗಟು ವ್ಯಾಪಾರಿಗಳಿಂದ ತಂದು ಇಲ್ಲಿ ಮಾರುತ್ತಾರೆ.[೧]

ಕನ್ನಡ ಕೆಲವು ಹುಡುಗರನ್ನು ಬಹುದೂರಿನ ರಾಜ್ಯಗಳಾದ ಒರಿಸ್ಸಾ, ಬಿಹಾರ, ಕೇರಳ, ಮಹಾರಾಷ್ಟ್ರ ಇನ್ನೂ ಮುಂತಾದ ರಾಜ್ಯಗಳಿಗೆ ವ್ಯಾಪಾರ ಮಾಡುವುದಕ್ಕಾಗಿ ಕರೆದುಕೊಂಡು ಹೋಗುತ್ತಾರೆ. ಇದರಿಂದ ಈ ಹುಡುಗರು ಅಪಾರ ಹಣಗಳಿಸುವುದರ ಮೂಲಕ ಕೆಲವು ಕುಟುಂಬಗಳಿಗೆ ಅನುಕೂಲವೇ ಆಗಿದೆ. ಆಕರ್ಷಕ ಕೂಲಿಯನ್ನು ನೀಡುವುದರಿಂದ ಒಪ್ಪೊತ್ತಿನ ಊಟಕ್ಕೆ ತೊಂದರೆಯಿಲ್ಲ ಎಂಬಂತೆ ಕನ್ನಡಿಗರ ಜೀವನ ಸಾಗುತ್ತಿದೆ. ಟಿಬೆಟಿಯನ್ನರಿಂದ ಕುಶಾಲನಗರಕ್ಕೆ ಅತಿ ಹೆಚ್ಚಿನ ಉಪಯೋಗವಿದೆ. ಮೈಸೂರಿನ ಪಿರಿಯಾಪಟ್ಟಣ ತಾಲ್ಲೂಕಿಗೆ ಸೇರಿದ ದೊಡ್ಡಹರವೆ ಗೊಂಡಾರಣ್ಯವನ್ನು ಪುನರ್ವಸತಿ ಹಾಗೂ ವ್ಯವಸಾಯಕ್ಕೆ ಕಡಿದು ಬಂದು ಮಾಡಲಾಗಿದೆ. ಇದು ಫಲವತ್ತಾದ ಭೂ ಪ್ರದೇಶವಾಗಿದ್ದು ಬೆಲೆಬಾಳುವ ಮರಗಳಾದ ತೇಗ, ಹೊನ್ನೆ, ಬೀಟೆ ಇವೇ ಮುಂತಾದ ಮರಗಳ ನಾಶ ಹೇರಳವಾಗಿ ನಡೆಯಿತು. ಈ ಕಾಡು ಕೊಡಗಿನ ಬೆಟ್ಟ ಸಾಲಿಗೆ ಸೇರಿಕೊಂಡಿದೆ. ಹಾಗೂ ಸದಾ ಕಾಲ ಸುರಿಯುತ್ತಿದ್ದ ಮಳೆಯು ಸಕಾಲಕ್ಕೆ ಬರುತ್ತಿಲ್ಲವಾದ್ದರಿಂದ ಕೆರೆ ಕಟ್ಟೆಗಳು ಬತ್ತಿ ಹೋಗುತ್ತಿವೆ. ಇದರಿಂದ ವ್ಯವಸಾಯವೂ ಕುಂಠಿತವಾಗಿದ್ದು ರೈತರು ಮಳೆಯಿಲ್ಲದೇ ಕಂಗಾಲಾಗಿದ್ದಾರೆ. ಸಾಮಾನ್ಯ ಜನರು ಉರುವಲಿಗಾಗಿ ಬಳಸುತ್ತಿದ್ದ ಸೌದೆ ಸಹ ದೊರಕದಾಗಿ ತಮ್ಮ ಜಮೀನುಗಳಲ್ಲಿದ್ದ ಹುಣಸೇ, ಮಾವು ಮತ್ತು ಹಲಸಿನ ಮರಗಳನ್ನು ಕಡಿದಿರುವುದರಿಂದ ಇಂದು ಇಡೀ ತಾಲ್ಲೂಕು ಬಣ ಮಹೋತ್ಸವವನ್ನು ಆಚರಿಸುತ್ತಿದೆ. ಟಿಬೆಟಿಯನ್ನರಿಂದ ಸಂಹರಿಸಲ್ಪಟ್ಟ ಅರಣ್ಯದಿಂದ ಮಳೆರಾಯನ ಆಗಮನವೂ ಅಪರೂಪವಾಗಿರುವುದರ ಜೊತೆಗೆ ತಾಲ್ಲೂಕು ಪಡ್ಡೆ ಹುಡುಗರು ಇವರ ಮನೆಗಳಲ್ಲಿ ಜೀತಕ್ಕೆಂದು ಸೇರುತ್ತಾರೆ. ಈ ಹುಡುಗರಿಗೆ ಇವರ ಮನೆಗಳಲ್ಲಿ ತಯಾರಿಸುವ ಚಾಂಗ್ ಮಧ್ಯವನ್ನು ಕೊಡುವುದಲ್ಲದೇ ಧೂಮಪಾನಕ್ಕಾಗಿ ಬಂಗಿ ಸೊಪ್ಪನ್ನು ಸರಬರಾಜು ಮಾಡುತ್ತಾರೆ. ಇದರ ಮೋಜಿಗೆ ಬಲಿಯಾಗಿರುವ ಈ ಅಮಾಯಕ ಹುಡುಗರು ವರ್ಷವಡೀ ಅವರು ಕೊಡುವ ಅಲ್ಪಸ್ವಲ್ಪ ಹಣಕ್ಕೂ ಹಾಗೂ ಚಾಂಗ್ ಮತ್ತು ಬಂದಿ ಸೊಪ್ಪಿನ ಬೀಡಿಗೂ ಆಕರ್ಷಿತರಾಗಿ ಜೀತದಾಳುಗಳಂತೆ ದುಡಿಯುತ್ತಿದ್ದಾರೆ. ಇದೊಂದು ಅನಿಷ್ಟ ಪದ್ಧತಿಯೆಂದು ಸಭೆ, ಸಮಾರಂಭಗಳಲ್ಲಿ ಭಾಷಣ ಬಿಗಿಯುವ ನಮ್ಮ ನಾಯಕರಿಗೆ ಇದರ ಬಗ್ಗೆ ಕಾಳಜಿಯೇ ಇಲ್ಲವೆಂಬಂತೆ ಕಾಣುತ್ತದೆ. ಇದನ್ನೆಲ್ಲಾ ವೀಕ್ಷಿಸಿದಾಗ

---

೧. ಬೈಲುಕುಪ್ಪೆ ಟಿಬೆಟಿಯನ್ನರ ಒಂದು ಅಧ್ಯಯನ : ಹೆಚ್.ಎನ್.ರಾಮಕೃಷ್ಣ, ಪು. ೨೬.

ಟಿಬೆಟಿಗರ ಪುನರ್ವಸತಿ ಕೇಂದ್ರಗಳು ಜೀತಪದ್ಧತಿಯ ಆಶ್ರಯ ತಾಣಗಳಾಗಿ ಮಾರ್ಪಟ್ಟಿವೆ ಮತ್ತು ಹೆಚ್ಚಿನ ರೀತಿಯಲ್ಲಿ ಮಾರ್ಪಾಟಾಗುತ್ತಿದೆ.[೧]

ಈ ಪುನರ್ವಸತಿ ಕೇಂದ್ರಗಳಲ್ಲಿ ನಮ್ಮ ತಾಲ್ಲೂಕಿನ ಜನರು ಮಾತ್ರವೇ ಜೀತದಾಳುಗಳಾಗಿ ದುಡಿಯುತ್ತಿರುವುದರ ಜೊತೆಗೆ ಬಿಹಾರ್, ಒರಿಸ್ಸಾ ಮುಂತಾದ ರಾಜ್ಯಗಳಿಂದ ಅಮಾಯಕ ಹುಡುಗರನ್ನು ಕರೆತಂದು ಊಟ–ತಿಂಡಿಗಳಿಗೆ ಮಾರು ಹೋಗುವಂತೆ ಮಾಡಿ ಜೀತದಾಳುಗಳಂತೆ ದುಡಿಸಿಕೊಳ್ಳುತ್ತಿದ್ದಾರೆ. ಇದಕ್ಕೆ ನಿದರ್ಶನವೆಂದರೆ ೧೯೯೯ರಲ್ಲಿ ಮೈಸೂರು ಬಸ್ ನಿಲ್ದಾಣದಲ್ಲಿ ಕೆಲವು ಬಿಹಾರಿ ಯುವಕರನ್ನು ಕರೆದೊಯ್ಯುತ್ತಿದ್ದ ಟಿಬೆಟಿಗನನ್ನು ಬಂಧಿಸಿದ್ದನ್ನು ಸ್ಮರಿಸಬಹುದು. ಪರಕೀಯರಾದ ಟಿಬೆಟಿಗರು ವ್ಯಾಪಾರ, ವ್ಯವಸಾಯ ಮತ್ತು ಕಾಳಸಂತೆ ಮುಂತಾದವುಗಳಲ್ಲಿ ನಿರತರಾಗಿದ್ದು ಅನಿವಾರ್ಯವಾದಾಗ 'ಲಾಮ'ಗಳಾಗಿ ದೀಕ್ಷೆ ತೆಗೆದುಕೊಂಡು ಪುನರ್ವಸತಿ ಕೇಂದ್ರಗಳಲ್ಲಿಯೇ ಉಳಿಯುತ್ತಾರೆ. ಆದರೆ ನಮ್ಮವರು ಅವರು ಕೊಡುವ ಊಟ, ತಿಂಡಿ, ಕುಡಿತ ಹಾಗೂ ಆಕರ್ಷಣೀಯ ಕೂಲಿಗಳಿಗೆ ಮಾರುಹೋಗಿ ತಮ್ಮ ಜಮೀನಿನಲ್ಲಿ ಎಷ್ಟೇ ಕೆಲಸವಿದ್ದರೂ ಅದನ್ನು ಲೆಕ್ಕಿಸದೇ ಅವರ ಮನೆಗಳಿಗೆ ಹೋಗಿ ದಾಸರಂತೆ ಗುಲಾಮರಂತೆ ದುಡಿಯುತ್ತಾರೆ.[೨]

ಟಿಬೆಟಿಯನ್ನರು ಬಂದಂದಿನಿಂದ ಸಾಮಾನ್ಯ ರೈತರು ಕೂಲಿಗಳನ್ನು ಕರೆದುಕೊಂಡು ಕೆಲಸ ಮಾಡಿಸಲು ತುಂಬಾ ದುಬಾರಿ ಎನಿಸುತ್ತಿದೆ. ಏಕೆಂದರೆ ಕೂಲಿಯ ದರ ಹೆಚ್ಚಾಗಿರುವುದೇ ಇದಕ್ಕೆ ಕಾರಣ. ಅಂತೆಯೇ ರಸ್ತೆ ಬದಿಯಲ್ಲಿದ್ದ ಅಲ್ಪಸ್ವಲ್ಪ ರೈತರ ಜಮೀನುಗಳನ್ನು ಅತ್ಯಂತ ಹೆಚ್ಚು ಬೆಲೆಯಲ್ಲಿ ಕೊಂಡುಕೊಂಡು ಅವರನ್ನು ಬೀದಿಪಾಲು ಮಾಡುತ್ತಿದ್ದಾರೆ. ಒಂದು ಎಕರೆಗೆ ಕನಿಷ್ಠ ಬೆಲೆ ಎಂದರೆ ಒಂದು ಲಕ್ಷದಿಂದ ಮೂರು ಲಕ್ಷದವರೆಗಿದೆ. ಟಿಬೆಟಿಯನ್ನರು ಬಂದು ೪೪ ವರ್ಷಗಳಾದರೂ ಭಾರತ ಸರ್ಕಾರ ಅವರಿಗೆ ಯಾವುದೇ ಹಕ್ಕುಬಾಧ್ಯತೆಗಳನ್ನು ನೀಡಿಲ್ಲ. ಕೆಲವು ಶ್ರೀಮಂತ ಟಿಬೆಟಿಯನ್ನರಿಗೆ ಪೌರತ್ವ ಸಿಕ್ಕಿದೆ. ಅಂತೆಯೇ ಕೊಂಗ್ವ ಜಾತಿಯವನಾದ ವಂಗೆ ಎಂಬುವನ ಮಗನಿಗೆ ಮತ ಚಲಾಯಿಸುವ ಹಕ್ಕಿದೆ. ಇವನು ಪ್ರತಿ ಮತದಾನ ಸಂದರ್ಭದಲ್ಲೂ ಮತಗಟ್ಟೆಗೆ ಬಂದು ಮತ ಚಲಾಯಿಸುತ್ತಾರೆ. ಕೆಲವು ವರ್ಷಗಳ ಹಿಂದೆ ರಾಜಕೀಯ ಹಕ್ಕಿಗಾಗಿ ಇವರು ಬೇಡಿಕೆಯನ್ನು ಮುಂದಿಟ್ಟಿದ್ದರು. ಒಂದು ವೇಳೆ ಅವರಿಗೆ ಈ ಹಕ್ಕನ್ನು ನೀಡಿದ್ದೇ ಆದಲ್ಲಿ ಮೊದಲೇ

೧. ಬೈಲುಕುಪ್ಪೆ ಟಿಬೆಟಿಯನ್ನರ ಒಂದು ಅಧ್ಯಯನ : ಹೆಚ್.ಎನ್.ರಾಮಕೃಷ್ಣ, ಪು. ೨೭.
೨. ಅದೇ, ಪು. ೨೮

ದಾಸರಂತೆ ಹಣದ ಆಮಿಷಕ್ಕೆ ಒಳಗಾಗುವ ಅಕ್ಕಪಕ್ಕದ ಕನ್ನಡಿಗರು ಅವರ ಜೊತೆಗೂಡುವುದರಲ್ಲಿ ಸಂದೇಹವಿಲ್ಲ. ಈಗಲೂ ಆಗುತ್ತಿರುವುದಿಷ್ಟೇ. ತಮ್ಮ ಕೆಲಸವಿದ್ದಾಗ ಆಕರ್ಷಕ ಕೂಲಿ ನೀಡಿ ಕೆಲಸ ಮಾಡಿಸಿಕೊಳ್ಳುತ್ತಾರೆ. ಆನಂತರ ಅವರನ್ನು ನೀನು ಯಾರೆಂದೂ ಮಾತನಾಡಿಸುವುದಿಲ್ಲ. ಇನ್ನಾದರೂ ಕನ್ನಡಿಗರು ತಮ್ಮ ದಾಸ್ಯದ ಬುದ್ಧಿಯನ್ನು ಬಿಟ್ಟು ಸ್ವತಂತ್ರ ಜೀವನವನ್ನು ನಡೆಸಿಕೊಂಡು ಹೋಗಲಿ ಅನ್ಯರ ಗುಲಾಮರಾಗುವುದನ್ನು ಬಿಟ್ಟು ತಮ್ಮ ಘನತೆ ಗೌರವ ಪ್ರತಿಷ್ಠೆಗಳನ್ನು ಮೆರೆಯಲಿ.[೧]

೧. ಬೈಲುಕುಪ್ಪೆ ಟಿಬೆಟಿಯನ್ನರ ಒಂದು ಅಧ್ಯಯನ : ಹೆಚ್.ಎನ್.ರಾಮಕೃಷ್ಣ, ಪು. ೨೯.

# ಅಧ್ಯಾಯ – ೨

# ಭಾರತ ಮತ್ತು ಟಿಬೆಟ್ ನಡುವಿನ ಸಾಂಸ್ಕೃತಿಕ ಮತ್ತು ಧಾರ್ಮಿಕ ಸಂಬಂಧ

ಭಾರತ ಮತ್ತು ಟಿಬೆಟ್ ನಡುವೆ ಪುರಾತನ ಕಾಲದಿಂದಲೂ ಎಲ್ಲಾ ವಿಧವಾದ ಸಂಬಂಧವಿದ್ದು, ಸಾಂಸ್ಕೃತಿಕ ಮತ್ತು ಧಾರ್ಮಿಕವಾಗಿ ಆಂತರಿಕ ಸಂಬಂಧವನ್ನು ಸೂಕ್ಷ್ಮವಾಗಿ ಮನಗಾಣಬಹುದು. ಇಷ್ಟೇ ಅಲ್ಲದೇ ಪರಸ್ಪರ ನಂಬಿಕೆ ಬೆಳೆದು ಬಂದಿದೆ. ಟಿಬೆಟಿಯನ್ನರು ಭಾರತವನ್ನು 'ಆರ್ಯಭೂಮಿ' ಎಂದು ಕರೆಯುತ್ತಾರೆ. ಟಿಬೆಟಿಯನ್ನರಿಗೆ ಭಾರತವು ಬೌದ್ಧಧರ್ಮದ ಮೂಲವಲ್ಲದೆ ಟಿಬೆಟ್ ಭಾಷೆಯ ಮೂಲ ಸ್ಥಾನವಾಗಿದೆ. ಅನಾದಿಕಾಲದಿಂದಲೂ ಟಿಬೆಟ್ ಮತ್ತು ಭಾರತದ ನಡುವೆ ಶಾಂತಿಯುತವಾದ ಬಾಂದವ್ಯವಿದ್ದು, ಇದನ್ನು ಗುರುಶಿಷ್ಯರ ಸಂಬಂಧಕ್ಕೆ ಹೋಲಿಸಬಹುದು.

ಟಿಬೆಟ್ ದೇಶದಲ್ಲಿ ಬಾನ್ (Bow-shamansim) ಎಂಬ ಸಂಸ್ಕೃತಿ ಮತ್ತು ಧರ್ಮ ಇದ್ದರೂ ಭಾರತದ ಮೇಲಿನ ಗಾಢವಾದ ನಂಬಿಕೆಯಿಂದ ಟಿಬೆಟಿಯನ್ ಅಕ್ಷರಗಳನ್ನು ಭಾರತದ ದೇವನಾಗರಿ ಲಿಪಿಯಿಂದ ನೇರವಾಗಿ ಪಡೆಯಲಾಯಿತು.[೧] ೫ನೇ ಶತಮಾನದಲ್ಲಿ (433AD) ಪೂರ್ವ ಭಾರತದ ಶನ್‌ಟರಾಕ್ಷಿತ (SHANTARAKSHITA) ಎಂಬ ವಿದ್ವಾಂಸ ಡೊಡೆಜಮಾಟೊಂಗ್ (DODEZAMATOG) ಎಂಬ ಮೂಲಗ್ರಂಥವನ್ನು (ಆಭರಣದಂತಿರುವ ಸೂತ್ರ) ಮತ್ತು 'ಪಂಗ್‌ಕಾಂಗ್‌ಭಗ್ಯಪ'(PANGKONG CHAGYAPA) (ಒಂದು ನೂರು ಪ್ರಾರ್ಥನೆ ಮತ್ತು ಒಂದು ನೂರು ಪ್ರಾರ್ಥನಾ ವಿಧಿಗಳು) ವನ್ನು 'ಲಾಥೊಥೊರಿಜ್ಞನಸನ್' (LHATHOTHORI NYENTSEN) ಎಂಬ ೨೮ನೇ ಟಿಬೆಟ್ ರಾಜರಿಗೆ ನೀಡಿದರು. ರಾಜರು ಈ ಮೂಲಗ್ರಂಥದ ಅರ್ಥವನ್ನು ಗ್ರಹಿಸಲಾರದಿದ್ದರಿಂದ ಈ ಮೂಲಗ್ರಂಥಕ್ಕೆ ಶಕ್ತಿಶಾಲಿ ರಹಸ್ಯ ಎಂದು ನಾಮಕರಣ ಮಾಡಿ ಇದಕ್ಕೆ ಅನವರತ ಪ್ರಾರ್ಥನೆ ಮತ್ತು ದೀರ್ಘದಂಡ ನಮಸ್ಕಾರಗಳನ್ನು ಮಾಡುತ್ತಿದ್ದರು. ಇದರಿಂದ ಅವರು ೧೬೦ ವರ್ಷ ಜೀವಿಸಿರಲು ಸಾಧ್ಯವಾಯಿತು. ಈ ರೀತಿಯಾಗಿ ಬೌದ್ಧಮತ ಮೊದಲನೆಯದಾಗಿ ಟಿಬೆಟ್‌ಗೆ ಆಗಮಿಸಿತು. ನಂತರ ೭ನೇ ಶತಮಾನದಲ್ಲಿ ೩೩ನೆಯ ರಾಜ ಸಾಂಗ್‌ತ್ಸೆನ್‌ಗಾಂಪೊ (SONGTSEN

---

೧. ಸ್ವರ್ಣದೇವಸ್ಥಾನ (Golden Temple) ಕನ್ನಡಕ್ಕೆ ಅನುವಾದ– ಡಿ.ಎನ್.ಪುರುಷೋತ್ತಮ ರಾವ್, ಪು. ೫೯.

GAMPO)ನ ಕಾಲದಲ್ಲಿ ಬೌದ್ಧಧರ್ಮವು ಭಾರತದಿಂದ ಟಿಬೆಟ್‌ಗೆ ಪ್ರಸಾರವಾಯಿತು. ನಂತರ ೨೨ನೇ ರಾಜ ೭ನೇ ಶತಮಾನದ ಮಧ್ಯಭಾಗದಲ್ಲಿ 'ಟ್ರಿಸೊಂಗ್ ಡ್ಯುಟ್ತ್ಸನ್' ಎಂಬ ದೊರೆಯ ಮುಲಾಸವಸ್ತಿವಾಡ ವಿನಯಾ ಸಂತತಿಯ ಆಧಾರದ ಮೇಲೆ 'ಭಿಕ್ಷು ಪದ್ಧತಿ'ಯನ್ನು ಜಾರಿಗೆ ತಂದನು. ಈ ಭಿಕ್ಷು ಪದ್ಧತಿಯು ಭಾರತದಿಂದ ಆಹ್ವಾನಿಸಿದ್ದ 'ಆಚಾರ್ಯ ಶಾಂತರಕ್ಷಿತ'ನಿಂದ ಸ್ಥಾಪಿಸಲ್ಪಟ್ಟ ಭಿಕ್ಷು ಸಂಘದಿಂದ ಸ್ಥಾಪನೆಯಾಯಿತು ಹಾಗೂ ಪದ್ಮ ಸಂಭವ ಅತೀಶ ನಾಗಾರ್ಜುನ ಮುಂತಾದವರಿಂದ ಬೌದ್ಧದರ್ಮವು ವೈಜ್ಞಾನಿಕವಾಗಿ ಟಿಬೆಟ್‌ನಲ್ಲಿ ಪ್ರಚಾರಗೊಂಡಿತು. ಬೌದ್ಧಧರ್ಮದ ಸಾಹಿತ್ಯವು ಟಿಬೆಟ್‌ನಲ್ಲಿ ನಿರ್ಮಾಣವಾಯಿತು. ಸ್ಯಾಮೆ ವಿಹಾರದಲ್ಲಿ ಭಾರತದ ಓಡಾಂತಪುರಿಯ ಮಹಾವಿಹಾರ ಬರೆದ ಮೂಲಪ್ರತಿಯಿಂದ ಇದನ್ನು ಭಾಷಾಂತರ ಮಾಡಲಾಗಿದೆ.[೧] ಟಿಬೆಟ್ ಭಾಷೆಯೂ ಭಾರತೀಯ ಮೂಲವಾಗಿದ್ದು 'ತೋಮ್ಮಿಸಂಬೋಟ' ಎಂಬ ಟಿಬೆಟಿಯನ್ ವ್ಯಕ್ತಿಯು ಭಾರತಕ್ಕೆ ಬಂದು ಸಂಸ್ಕೃತ ಭಾಷೆಯಿಂದ ತಮ್ಮ ಲಿಪಿಯನ್ನು ರಚಿಸಿದನು. ಹಲವಾರು ಸಂಸ್ಕೃತದ ಕೃತಿಗಳನ್ನು 'ಸ್ಯಾಮೆ ತೋ ಇಡಿಂಗ್ ಜಾಲೂ' ಎಂಬ ವಿಹಾರಗಳಲ್ಲಿ ಅಡಗಿಸಿಟ್ಟಿದ್ದರು. ಆದರೆ ಚೈನಾವು ಸಾಂಸ್ಕೃತಿಕ ಕ್ರಾಂತಿ ಸಮಯದಲ್ಲಿ ಕೆಲವನ್ನು ಸುಡಲಾಯಿತು.

ರಾಮನ ಜೀವನಚರಿತ್ರೆ, ಪಂಚಪಾಂಡವರ ಜೀವನಚರಿತ್ರೆ, ಮಹಾಭಾರತ ಹಾಗೂ ಕಾಮಸೂತ್ರ ಮುಂತಾದ ಹಿಂದೂಗಳ ಪವಿತ್ರ ಗ್ರಂಥಗಳು ಟಿಬೆಟ್ ಭಾಷೆಯಲ್ಲಿ ದೊರೆಯುತ್ತವೆ. ಟಿಬೆಟ್‌ನಿಂದ ಬಂದು ಭೇಟಿಯಿತ್ತ ಹಲವಾರು ಟಿಬೆಟ್ ಯಾತ್ರಿಕರ ಹಾಗೂ ಜ್ಞಾನಿಗಳ ಸಹಿಗಳನ್ನು ಬುದ್ಧಗಯಾದಲ್ಲಿ ಕಾಣಬಹುದು. ಟಿಬೆಟಿಯನ್ನರು ತಮ್ಮ ಜೀವಿತದ ಕಾಲದಲ್ಲಿ ಒಮ್ಮೆಯಾದರೂ 'ಬುದ್ಧಗಯಾ'ಕ್ಕೆ ಭೇಟಿ ನೀಡಬೇಕೆಂಬ ನಂಬಿಕೆ ಟಿಬೆಟಿಯನ್ನರಿಗಿದೆ.

ಟಿಬೆಟ್‌ನ ಚಿತ್ರಕಲೆಯು ಕಾಶ್ಮೀರದ ಶೈಲಿಯಲ್ಲಿದೆ. ಅಶೋಕನನ್ನು ತಮ್ಮ ರಾಷ್ಟ್ರ ಪ್ರಮುಖನೆಂದು ಭಾವಿಸುತ್ತಾರೆ. ಹಾಗೆಯೇ ವೈದ್ಯಶಾಸ್ತ್ರವೂ ಭಾರತದ ಆಯುರ್ವೇದವನ್ನು ಹೋಲುತ್ತಿದ್ದು ೭೫೮-೧೦೫೫ ಅವಧಿಯಲ್ಲಿ ಭಾಷಾಂತರಕಾರ 'ರಿಂಜೇನ್-ಸ್ಯಾಮ್‌ಗೋ' ಎಂಬುವನು ಪಶ್ಚಿಮ ಟಿಬೆಟ್ ಆಳುತ್ತಿದ್ದ 'ಲಾಮಾ ಎಶಿ' ಎಂಬ ದೊರೆಯ ಕಾಲದಲ್ಲಿ ವೈದ್ಯಗ್ರಂಥಗಳನ್ನು ಸಂಸ್ಕೃತದಿಂದ ಟಿಬೆಟ್ ಭಾಷೆಗೆ ಭಾಷಾಂತರಿಸಿದ್ದಾನೆ. ಕಾಲಚಕ್ರ ತಂತ್ರ, ಲಲಿತ್ವಸ್ತಾರ ಸೂತ್ರ ಮುಂತಾದ ಗ್ರಂಥಗಳನ್ನು ಟಿಬೆಟ್ ಭಾಷೆಗೆ ಭಾಷಾಂತರಿಸಲಾಯಿತು. ಹಿಂದೂದೇವತೆ ಮಹದೇವನಿಂದ

---

೧. ಸ್ವರ್ಣದೇವಸ್ಥಾನ (Golden Temple) ಕನ್ನಡಕ್ಕೆ ಅನುವಾದ- ಡಿ.ಎನ್.ಪುರುಷೋತ್ತಮ ರಾವ್, ಪು. ೬೦.

ಬೋಧಿಸಲ್ಪಟ್ಟ ಸ್ವರೋದಯವು ೧೧ ಅಥವಾ ೧೨ನೇ ಶತಮಾನದಲ್ಲಿ ಸಂಸ್ಕೃತದಿಂದ ಟಿಬೆಟ್ ಭಾಷೆಗೆ ಭಾಷಾಂತರಿಸಲಾಯಿತು. ಟಿಬೆಟ್‌ನ ಯಾತ್ರಿಕರು (ಬೋಧಗಯಾ) ಬುದ್ಧಗಯಾಕ್ಕೂ ಭಾರತೀಯರೂ ಭಾರತೀಯ ಯಾತ್ರಿಕರು ಮಾನಸ ಸರೋವರಕ್ಕೂ ಕೊನೆಯ ಪವಿತ್ರ ಸ್ಥಳಗಳೆಂದು ಭೇಟಿ ನೀಡುತ್ತಾರೆ.[೧]

ಗುರು ಪದ್ಮಸಂಭವ ಮತ್ತು ಧರ್ಮಾಧಿಪತಿ ಶಂಟರಕ್ಷಿತರ ಮಾರ್ಗದರ್ಶನದಂತೆ ೧೦೮ ವಿದ್ವಾಂಸರನ್ನು ಟಿಬೆಟ್‌ಗೆ ಆಹ್ವಾನಿಸಿ ಬೌದ್ಧಧರ್ಮದ ಪವಿತ್ರ ಗ್ರಂಥಗಳನ್ನು ಸಂಸ್ಕೃತದಿಂದ ಟಿಬೆಟ್ ಭಾಷೆಗೆ ಭಾಷಾಂತರ ಮಾಡಿಸಲಾಯಿತು. ಈ ಅಪರಿಮಿತ ಮೂಲಗ್ರಂಥಗಳು ಭಗವಾನ್ ಬುದ್ಧಶಕ್ಯಮುನಿಯವರ ಬೋಧನೆಗಳಲ್ಲದೆ ಸುಮಾರು ೩೦೦ಕ್ಕಿಂತ ಹೆಚ್ಚಿನವುಗಳು. ಭಾರತದ ಮಹಾನ್ ವಿದ್ವಾಂಸರ ಅತ್ಯುತ್ತಮ ವ್ಯಾಖ್ಯಾನ ವಿವರಣೆಗಳನ್ನು ಒಳಗೊಂಡಿರುತ್ತದೆ. ಈ ಅತ್ಯುತ್ತಮ ವ್ಯಾಖ್ಯಾನ ವಿವರಣೆಗಳನ್ನು ಎಲ್ಲಾ ಟಿಬೆಟಿಯನ್ ನಾಲ್ಕು ಬೌದ್ಧಧರ್ಮದ ವಿದ್ಯಾಲಯಗಳಲ್ಲಿ ಕೇಂದ್ರ ಬಿಂದುವಿನಂತೆ ಬೌದ್ಧಧರ್ಮದ ತತ್ವಜ್ಞಾನ ಕಲಿಯುವಾಗ ಉಪಯೋಗಿಸಲಾಗುತ್ತದೆ.

ಉದಾಹರಣೆಗಾಗಿ ನಾವು ಮಾಧ್ಯಮಿಕ, ತರ್ಕ, ಅಭಿಧರ್ಮ ಮತ್ತು ಅಭಿಸಾಮಯಲಂಕಾರ ಅಧ್ಯಯನ ಮಾಡುವಾಗ ಸಂಪೂರ್ಣವಾಗಿ ನಾಗಾರ್ಜುನ ಆರ್ಯದೇವ, ದಿಗ್ ನಗ, ಧರ್ಮಕೀರ್ತಿ, ವಾಸುಬಂದು ಮತ್ತು ಅಸಂಗರ ಕೃತಿಗಳ ಮೇಲೆ ಅನುಕ್ರಮವಾಗಿ ಅವಲಂಬಿಸಿ ವಿಶ್ವಾಸವಿಟ್ಟಿದ್ದೇವೆ. ಈ ಎಲ್ಲಾ ವಿದ್ವಾಂಸರು ದಕ್ಷಿಣ ಭಾರತದವರು. ಇವರೆಲ್ಲರೂ ಆರು ಆಭರಣಗಳೆಂದು ಟಿಬೆಟಿಯನ್ನರಿಗೆ ಚಿರಪರಿಚಿತವಾಗಿದೆ. ಟಿಬೆಟಿಯನ್ನರು ವಿನಯ ವಿಭಾಗವನ್ನು ಅಧ್ಯಯನ ಮಾಡುವಾಗ ಗುನಪ್ರಭ ಮತ್ತು ಶಾಖ್ಯಪ್ರಭ ಎಂಬ ಎರಡು ಅತ್ಯುತ್ತಮ ಮಹಾವಿದ್ವಾಂಸರ ಕೃತಿಯನ್ನು ಆಧಾರವಾಗಿ ಪರಾಮರ್ಶಿಸುತ್ತಾರೆ. ಈಗಲೂ ಟಿಬೆಟಿಯನ್ನರು ದಕ್ಷಿಣ ಭಾರತದ ದಂಡಿ ವಿದ್ವಾಂಸರಿಂದ ರಚಿತವಾದ ಬಹು ಅಮೂಲ್ಯವಾದ ಕಾವ್ಯ ಮೂಲಗ್ರಂಥವನ್ನು ಅಧ್ಯಯನ ಮಾಡುತ್ತಿದ್ದಾರೆ. ಟಿಬೆಟಿಯನ್ನರು ತಾಂತ್ರಿಕ ಧರ್ಮಗ್ರಂಥವನ್ನು ಅಧ್ಯಯನ ಮಾಡುವಾಗ ಗುರು ಪದ್ಮಸಂಭವ ಮತ್ತು ೮ ವಿದ್ಯಾಧರ ವಿದ್ವಾಂಸರ ಮೂಲ ಕೃತಿಗಳ ಮೇಲೆ ಅವಲಂಬಿತರಾಗಿದ್ದೇವೆ. ಸಂಕ್ಷಿಪ್ತದಲ್ಲಿ ಟಿಬೆಟಿನ ಜನತೆ ಈ ಸಿದ್ಧಿ ಪಡೆದ ವಿದ್ವಾಂಸ ಮಹಾಮಹಿಮರನ್ನು ತಮ್ಮ ಆಧ್ಯಾತ್ಮಿಕ ಮಾರ್ಗದರ್ಶಕರಂತೆಯೂ ಮತ್ತು ವಿಶೇಷವಾಗಿ ಬುದ್ಧ ಶಕ್ಯಮುನಿ ಮತ್ತು ಗುರು ಪದ್ಮಸಂಭವರನ್ನು ತಮ್ಮ ಜೀವನ

---

೧. ಸ್ವರ್ಣದೇವಸ್ಥಾನ (Golden Temple) ಕನ್ನಡಕ್ಕೆ ಅನುವಾದ– ಡಿ.ಎನ್.ಪುರುಷೋತ್ತಮ ರಾವ್, ಪು. ೬೧.

ಸಾಫಲ್ಯಗೊಳಿಸಿಕೊಳ್ಳುವ ಅಂತಿಮ ಆಶ್ರಯ ತಾಣವೆಂದು ಪರಿಪೂರ್ಣವಾಗಿ ನಂಬಿದ್ದಾರೆ.[೧]

ಆದ್ದರಿಂದ ಸಕಲ ಘನತೆವೆತ್ತ ವಿದ್ಯಾವಂತರಿಂದ ಅನಕ್ಷರಸ್ಥರವರೆಗೆ ಎಲ್ಲಾ ಟಿಬೆಟಿಯನ್ನರಿಗೂ, ಭಾರತ, ಉದಾತ್ತ ಮನಸ್ಸಿನ ವ್ಯಕ್ತಿತ್ವದ ಮಹಾಪುರುಷರ ಜನ್ಮಸ್ಥಳವೆಂದು ಚೆನ್ನಾಗಿ ಮನಃಪೂರ್ವಕವಾಗಿ ತಿಳಿದಿದೆ. ಅದರಲ್ಲೂ ದಕ್ಷಿಣಭಾರತವನ್ನು ಅರಿವಿನ ಜನ್ಮಸ್ಥಳ ಮತ್ತು ಅರಿವಿನ ಪಾಲನೆಯ ಪವಿತ್ರಭೂಮಿ ಎಂದು ಅಭಿಮಾನದಿಂದ ತಿಳಿದಿದ್ದೇವೆ. ಇಲ್ಲಿ ಜನ್ಮತಾಳಿದ ಅಸಂಖ್ಯಾತ ಮಹಾಮಹಿಮರಲ್ಲಿ ನಾವು ಈ ಮುಂದೆ ಅರಹಿದಂತೆ ಕೆಲವೇ ಕೆಲವರ ಹೆಸರನ್ನು ಮಾತ್ರ ನಾವು ನಮೂದಿಸಿದ್ದೇವೆ. ಇಂದಿಗೂ ಸಹ ಟಿಬೆಟಿಯನ್ನರು ಬಹು ದೃಢವಾಗಿ ಭಾರತದ ಅಮೂಲ್ಯ ಸಂಪ್ರದಾಯಗಳನ್ನು ಗೌರವದಿಂದ ಸಂರಕ್ಷಣೆ ಮಾಡಿ ನಡೆಸಿಕೊಂಡು ಬಂದಿರುತ್ತಾರೆ. ಭಾರತದ ಅಳತೆ ಮಾಡಲಾಗದ ಅನುಕಂಪ ಮತ್ತು ದಯಾಶೀಲ ವಿದ್ವಾಂಸರ ಅಗಾದ ನೆರವಿನಿಂದ ಭಗವಾನ್ ಬುದ್ಧರ ಬೋಧನೆಗಳು ಟಿಬೆಟ್ ದೇಶಕ್ಕೆ ಆಗಮಿಸಿ ಸಮಗ್ರ ರೀತಿಯಿಂದ ಸ್ಥಾಪಿತಗೊಂಡು ಟಿಬೆಟಿನಲ್ಲಿ ಸಂಪೂರ್ಣವಾಗಿ ಪಸರಿಸಿತು. ಈ ಧರ್ಮ ಸ್ಥಾಪನೆಯ ಆರಂಭದಿಂದಲೂ ಇಂದಿನ ಮತ್ತು ಮುಂದಿನ ಟಿಬೆಟಿಯನ್ ಜನತೆ ಎಂದೆಂದಿಗೂ ಅವಿರತವಾಗಿ ಭಾರತಕ್ಕೆ ಕೃತಜ್ಞತೆ ಅರ್ಪಿಸುತ್ತಲೇ ಇರುತ್ತಾರೆ.

ಭಾರತ ಮತ್ತು ಟಿಬೆಟ್‌ನ ಶಾಶ್ವತ ನಿರಂತರ ಮತ್ತು ನಿಕಟ ಬಾಂಧವ್ಯ ಅಂದು ಇಂದು ಮತ್ತು ಎಂದಿಗೂ ಸಾಗುತ್ತಲೇ ಇರುವುದರಿಂದ ನಾವು ಎಷ್ಟು ಸುದೀರ್ಘವಾಗಿ ಈ ಸಂಬಂಧವನ್ನು ಹಾಡಿ ಹೊಗಳಿದರು ಕಮ್ಮಿ ಎನಿಸುತ್ತದೆ.

ಐದನೆಯ ಶತಮಾನದಿಂದ ಇಂದಿನವರೆಗೆ ಭಾರತ ಮತ್ತು ಟಿಬೆಟ್‌ನ ಸಂಸ್ಕೃತಿ ಮತ್ತು ಧರ್ಮ ಬಹಳ ಅನ್ಯೋನ್ಯವಾಗಿ ಮತ್ತು ಸಾಮರಸ್ಯದಿಂದ ಸಮರ್ಪಕವಾಗಿ ಒಂದಕ್ಕೊಂದು ಬೆಸೆದುಕೊಂಡಿದೆ. ಈಗಲೂ ಸಹ ಟಿಬೆಟಿಯನ್ನರು ಭಾರತದಿಂದ ಸಾಗಿಬಂದ ಸಂಸ್ಕೃತಿ ಮತ್ತು ಧರ್ಮವನ್ನು ಅನುಕರಿಸುತ್ತಿದ್ದಾರೆ ಮತ್ತು ಭಾರತದ ಮಹಾನ್ ವಿದ್ವಾಂಸರನ್ನು ಗೌರವಿಸುವ ಅಭ್ಯಾಸ ಈಗಲೂ ಸ್ವಲ್ಪವೂ ಕಡಿಮೆ ಆಗದಂತೆ ನಡೆದುಕೊಂಡು ಬರುತ್ತಿದೆ. ಈಗ ನಾವು ಟಿಬೆಟಿಯನ್ನರು ನಮ್ಮ ಚರಿತ್ರೆಯ ಕಷ್ಟದ ಕಾಲವನ್ನು ನಡೆಸುತ್ತಿದ್ದೇವೆ. ಇಂತಹ ಸಂಕಟ ಸಮಯದಲ್ಲಿ ಭಾರತದ ಜನತೆ ಮತ್ತು

---

೧. ಸ್ವರ್ಣದೇವಸ್ಥಾನ (Golden Temple) ಕನ್ನಡಕ್ಕೆ ಅನುವಾದ– ಡಿ.ಎನ್.ಪುರುಷೋತ್ತಮ ರಾವ್, ಪು. ೬೨.

ಸರ್ಕಾರ ನಮಗೆ ಸಕಲ ತರದ ಸಹಾಯ ಮಾಡಿ ನಮ್ಮ ಸಂಸ್ಕೃತಿ, ಧರ್ಮ ಮತ್ತು ಜೀವನ ರೀತಿಯನ್ನು ರಕ್ಷಿಸಿ ಮತ್ತು ಕಾಪಾಡಿಕೊಂಡು ಮುಂದುವರಿಸಲು ಸಕಲ ಅನುಕೂಲ ಮಾಡಿಕೊಟ್ಟಿದ್ದಾರೆ. ಆದ್ದರಿಂದ ನಾವು ಭಾರತದಲ್ಲಿ ಸಂತೋಷದಿಂದ ಸುಭದ್ರ ಜೀವನ ನಡೆಸುತ್ತಿದ್ದೇವೆ.

ಆದ್ದರಿಂದ ಮೇಲ್ಕಂಡ ಎಲ್ಲಾ ಮುಖ್ಯಾಂಶಗಳನ್ನು ಅವಲೋಕಿಸಿದಾಗ ಭಾರತ ಮತ್ತು ಟಿಬೆಟ್ ಬಿಡಿಸಲಾರದ ಬಂಧನಕ್ಕೆ ಒಳಗಾಗಿವೆ. ದಿವಂಗತ ಪ್ರಧಾನಿ ಪಂಡಿತ ಜವಹರಲಾಲ್ ನೆಹರೂರವರು ಲಕ್ಷಾಂತರ ನಿರಾಶ್ರಿತ ಟಿಬೆಟಿಯನ್ನರಿಗೆ ಪುನರ್ವಸತಿ ಕಲ್ಪಿಸಿಕೊಟ್ಟರು. ಅದಕ್ಕಾಗಿ ಅವರಿಗೆ ಚಿರಋಣಿಯಾಗಿರುತ್ತೇನೆಂದು ದಲಾಯ್‌ಲಾಮರು ಆಗಾಗ ಸಭೆ ಸಮಾರಂಭಗಳಲ್ಲಿ ನೆನೆಯುತ್ತಾರೆ. ಇದರಿಂದಾಗಿ ಟಿಬೆಟ್ ಭಾರತಗಳ ಬಾಂಧವ್ಯ ಅಮರವಾದುದು ಎಂಬುದನ್ನು ಮರೆಯುವಂತಿಲ್ಲ.

# ಅಧ್ಯಾಯ – ೩

# ಟಿಬೆಟ್ಟಿಯನ್ನರ ಆಗಮನದ ಇತಿಹಾಸ

'ಟಿಬೆಟ್' ದೇಶವನ್ನು ಪ್ರಪಂಚದ ಮೇಲ್ಛಾವಣಿ ಎಂದು ಕರೆಯಲಾಗಿದೆ. ಏಷ್ಯಾಖಂಡದ ಮಧ್ಯಭಾಗದಲ್ಲಿ ಹಿಮಾಲಯ ಪರ್ವತ ತಪ್ಪಲಲ್ಲಿ ಪ್ರಪಂಚದಲ್ಲೇ ಅತಿ ಎತ್ತರವಾದ ಭೂಪ್ರದೇಶದಲ್ಲಿ ನಿರ್ಮಿತವಾದ ಗುಡ್ಡಗಾಡು ಅರಣ್ಯ ಹುಲ್ಲುಗಾವಲಿನಿಂದ ಕೂಡಿದ ಸುಂದರವಾದ ಪುಟ್ಟದೇಶವೇ ಟಿಬೆಟ್.

ಎರಡನೇ ಮಹಾಯುದ್ಧದ ಸಂದರ್ಭದಲ್ಲಿ ಹಿಟ್ಲರನು ಯಹೂದಿಗಳನ್ನು (ಜೀವ್ಸ್) ಚಿತ್ರಹಿಂಸೆ ಮಾಡಿ ದೇಶದಿಂದ ಹೊರದೂಡಿದಂತೆ ೧೯೪೯–೫೦ರಲ್ಲಿ ಸಮತಾವಾದ ಸರ್ಕಾರವನ್ನು ಹೊಸದಾಗಿ ಹೊಂದಿದೆ.[೧] ಚೀನಾದ ಕೆಂಪುಸೈನ್ಯವು ಟಿಬೆಟ್‌ನ ಮೇಲೆ ಹಠಾತ್ ದಾಳಿ ನಡೆಸಿ ಮಾರಣ ಹೋಮ ನಡೆಸಿತು. ೧೯೪೫ ರಿಂದ ೧೯೫೯ರ ತನಕವೂ ಮಂದಗತಿಯಲ್ಲಿ ನಡೆದ ಚೀನೀ ದೌರ್ಜನ್ಯವು ೧೯೫೯ ಮಾರ್ಚ್ ೧೦ ರಂದು ರಾಷ್ಟ್ರವ್ಯಾಪಿ ಹತ್ಯಾಕಾಂಡವನ್ನೇ ಮಾಡಿತು. ಇದರಿಂದಾಗಿ ಉಗ್ರ ಶಿಕ್ಷೆ ಮತ್ತು ಕೆಂಪು ಸೈನ್ಯದ ಕ್ರೂರ ಹಿಂಸೆಯನ್ನು ತಾಳಲಾರದೆ ತಮ್ಮ ನಾಯಕ ಹಾಗೂ ಧರ್ಮಗುರುವಾದ ದಲಾಯಿಲಾಮಾರನ್ನು ಜೊತೆಗೂಡಿ ಹೆಸರುಕತ್ತೆ ಕುದುರೆಗಳನ್ನೇರಿ ಬಹುಸಂಖ್ಯಾತ ಟಿಬೆಟಿಯನ್ನರು ಹಿಮಾಲಯ ದಾಟಿ ಭಾರತಕ್ಕೆ ಬಂದು ನೆಲೆಸಿದರು.

೧೯೬೦ರಲ್ಲಿ ಟಿಬೆಟ್ ನಿರಾಶ್ರಿತರು ಭಾರತಕ್ಕೆ ಬಂದಾಗ ಅಂದಿನ ಭಾರತದ ಪ್ರಧಾನಿ ದಿವಂಗತ ಜವಹರ್‌ಲಾಲ್ ನೆಹರೂ ಅವರು ಬೈಲುಕುಪ್ಪೆಯನ್ನು ಪುನರ್ವಸತಿ ಕೇಂದ್ರವನ್ನಾಗಿ ಮಾಡಿಕೊಟ್ಟರು.[೨]

ಭಾರತದ ಕೆಲವು ಮುಖ್ಯ ಪಟ್ಟಣಗಳಲ್ಲಿ ರಸ್ತೆ ಬದಿಯಲ್ಲಿ ಸ್ವೆಟರ್, ಜೀನ್ಸ್‌ಪ್ಯಾಂಟ್, ಎಲೆಕ್ಟ್ರಾನಿಕ್ ಉಪಕರಣಗಳು ಮತ್ತು ಸುಗಂದ ದ್ರವ್ಯ ಹಾಗೂ ಹಿರೋಪೆನ್ ಮುಂತಾದ ವಸ್ತುಗಳನ್ನು ಮಾರುತ್ತಾ ಕುಳಿತಿರುವ ಗೋದಿ ಬಣ್ಣದ, ಚಿಕ್ಕ ಕಣ್ಣಿನ ಚಪ್ಪಟೆ ಮೂಗಿನ ದೃಢಕಾಯ ಮಟ್ಟವಾದ ಆಳುತನವನ್ನು ಹೊಂದಿರುವ ಜನರೇ ಟಿಬೆಟಿಯನ್ನರು. ಇವರು ಮೂಲತಃ ಮಂಗೋಲಿಯ ಬುಡಕಟ್ಟಿಗೆ ಸೇರಿದ ಗುಡ್ಡಗಾಡು ಪ್ರದೇಶದಲ್ಲಿ ವಾಸಿಸುವ ಜನರು. ಒರಟು ಸ್ವಭಾವದ ಧೈರ್ಯಶಾಲಿಗಳು, ಸಾಧಾರಣ ರೋಗರುಜಿನಗಳಿಗೆ ಅಳುಕದ, ಜಗ್ಗದ ಜನರು. ಇವರು ಪ್ರಾರಂಭದಲ್ಲಿ

---

೧. ಪ್ರಪಂಚದ ಮೇಲ್ಛಾವಣಿ ಟಿಬೆಟ್:ಲೇಖಕರು: ಎಚ್.ಸಿ.ಲೋಹಿತಾಶ್ವ, ಪು. ೪೨.
೨. ಅದೇ, ಪು. ೪೩.

ಬಾನ್ ಸಂಪ್ರದಾಯವನ್ನು ಅನುಸರಿಸುತ್ತಿದ್ದು ೭ನೇ ಶತಮಾನದಿಂದೀಚೆಗೆ ಬೌದ್ಧಧರ್ಮವನ್ನು ಅನುಸರಿಸುತ್ತಿರುವ ಒಂದು ಜನರ ಗುಂಪಾಗಿದೆ. ಪ್ರಾರಂಭದಲ್ಲಿ ಡೇರೆಗಳಲ್ಲಿ ವಾಸಿಸುತ್ತಿದ್ದು ಇತ್ತೀಚೆಗೆ ಭಾರತ ಸರ್ಕಾರದ ಸಹಾಯದಿಂದ ಒಂದೆರಡು ಎಕರೆ ವ್ಯವಸಾಯದ ಭೂಮಿಯನ್ನು ಪಡೆದುಕೊಂಡು ಜೀವನ ಮಾಡುತ್ತಿದ್ದಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಶೈಕ್ಷಣಿಕ, ಸಾಂಸ್ಕೃತಿಕ, ಆಡಳಿತ ವಿಷಯ ಹಾಗೂ ಬೌದ್ಧಿಕ ವಿಚಾರಗಳಲ್ಲಿ ಪ್ರಬಲಜ್ಞಾನ ಹೊಂದಿರುವ ಜನಂಗವಾಗಿ ಭಾರತ ಯೂರೋಪ್ ರಾಷ್ಟ್ರಗಳಲ್ಲಿ ಮುಂದೊಂದು ದಿನ ಸ್ವತಂತ್ರ ಪ್ರಜಾಪ್ರಭುತ್ವವಾದಿ 'ಟಿಬೆಟ್'ವೊಂದನ್ನು ಹೊಂದುತ್ತೇವೆ ಎಂಬ ನಂಬಿಕೆಯೊಂದಿಗೆ ಸಾಗುತ್ತಿದ್ದಾರೆ.[೧]

ಟಿಬೆಟಿಯನ್ನರ ಆಗಮನದಿಂದ ಸಾಧಕಗಳಿಗಿಂತ ಬಾಧಕಗಳೇ ಹೆಚ್ಚಾಗಿವೆ. ಪ್ರತಿಯೊಂದು ಕಾರ್ಯಕ್ಕೂ ಕುಶಾಲನಗರದ ವಣಿಕರನ್ನು ಆಶ್ರಯಿಸಿರುವುದರಿಂದ ಆ ವಣಿಕರು ಶ್ರೀಮಂತರಾಗಿದ್ದಾರೆ. ಸಂತೆಯ ದಿನ ಪ್ರತಿಯೊಬ್ಬರೂ ಆಟೋದಲ್ಲಿಯೇ ಹೋಗುವುದರಿಂದ ಆಟೋದವರಿಗೆ ಲಾಭವೇ ಲಾಭ! ಟಿಬೆಟಿಯನ್ನರಿಗೆ ಚಲನಚಿತ್ರ, ವಿಡಿಯೋ ನೋಡುವ, ಸಂಗೀತ ಕೇಳುವ, ರಾಗಿ ಮತ್ತು ಭತ್ತದಿಂದ ತಯಾರಿಸಿದ 'ಚಾಂಗ'ನ್ನು ಸೇವಿಸುವ ಪರಿಪಾಠವಿದೆ. ಇಷ್ಟೇ ಅಲ್ಲದೇ ಇವರು ವ್ಯಾಪಾರ ಮಾಡುವುದರಲ್ಲಿ ಎತ್ತಿದ ಕೈ. ಉಣ್ಣೆ ಚರ್ಮದ ಪದಾರ್ಥ ಹಾಗೂ ಎಲೆಕ್ಟ್ರಾನಿಕ್ಸ್ ವಸ್ತುಗಳನ್ನು ಲೂಧಿಯಾನ ಮತ್ತು ದೆಹಲಿಯ ಸಗಟು ವ್ಯಾಪಾರಿಗಳಿಂದ ತಂದು ಇಲ್ಲಿ ಮಾರುತ್ತಾರೆ.

ಕನ್ನಡದ ಕೆಲವು ಹುಡುಗರನ್ನು ಬಹುದೂರದ ರಾಜ್ಯಗಳಾದ ಒರಿಸ್ಸಾ, ಬಿಹಾರ, ಕೇರಳ, ಮಹಾರಾಷ್ಟ್ರ ಇನ್ನೂ ಮುಂತಾದ ರಾಜ್ಯಗಳಿಗೆ ವ್ಯಾಪಾರ ಮಾಡುವುದಕ್ಕಾಗಿ ಕರೆದುಕೊಂಡು ಹೋಗುತ್ತಾರೆ. ಇದರಿಂದ ಈ ಹುಡುಗರು ಅಪಾರ ಹಣ ಗಳಿಸುವುದರ ಮೂಲಕ ಕೆಲವು ಕುಟುಂಬಗಳಿಗೆ ಅನುಕೂಲವೇ ಆಗಿದೆ. ಆಕರ್ಷಕ ಕೂಲಿಯನ್ನು ನೀಡುವುದರಿಂದ ಒಪ್ಪೊತ್ತಿನ ಊಟಕ್ಕೆ ತೊಂದರೆಯಿಲ್ಲ ಎಂಬಂತೆ ಕನ್ನಡಿಗರ ಜೀವನ ಸಾಗುತ್ತಿದೆ. ಟಿಬೆಟಿಯನ್ನರಿಂದ ಕುಶಾಲನಗರಕ್ಕೆ ಅತಿ ಹೆಚ್ಚಿನ ಉಪಯೋಗವಾಗಿದ್ದರೆ ಮೈಸೂರಿನ ಪಿರಿಯಾಪಟ್ಟಣ ತಾಲ್ಲೂಕಿಗೆ ಅತಿ ಹೆಚ್ಚು ನಷ್ಟವಾಗಿದೆ.[೨]

ಪಿರಿಯಾಪಟ್ಟಣ ತಾಲ್ಲೂಕಿಗೆ ಸೇರಿದ ದೊಡ್ಡ ಹರವೆ ಗೊಂಡಾರಣ್ಯವನ್ನು ಪುನರ್ವಸತಿ ಹಾಗೂ ವ್ಯವಸಾಯಕ್ಕಾಗಿ ಕಡಿದು ಬರಿದು ಮಾಡಲಾಗಿದೆ. ಇದು

೧. ಪ್ರಪಂಚದ ಮೇಲ್ಛಾವಣಿ ಟಿಬೆಟ್:ಲೇಖಕರು: ಎಚ್.ಸಿ.ಲೋಹಿತಾಶ್ವ, ಪು. ೪೪.
೨. ಅದೇ, ಪು. ೪೫.

ಫಲವತ್ತಾದ ಭೂ ಪ್ರದೇಶವಾಗಿದ್ದು ಬೆಲೆಬಾಳುವ ಮರಗಳಾದ ತೇಗ, ಹೊನ್ನೆ, ಬೀಟೆ ಇವೇ ಮುಂತಾದ ಮರಗಳ ನಾಶ ಹೇರಳವಾಗಿ ನಡೆಯಿತು.[೧] ಈ ಕಾಡು ಕೊಡಗಿನ ಬೆಟ್ಟದ ಸಾಲಿಗೆ ಸೇರಿಕೊಂಡಿದೆ. ಹಾಗೂ ಸದಾ ಕಲ ಸುರಿಯುತ್ತಿದ್ದ ಮಳೆಯು ಸಕಾಲಕ್ಕೆ ಬರುತ್ತಿಲ್ಲವಾದ್ದರಿಂದ ಕೆರೆಕಟ್ಟೆಗಳು ಬತ್ತಿ ಹೋಗುತ್ತಿವೆ. ಇದರಿಂದ ವ್ಯವಸಾಯವೂ ಕುಂಠಿತವಾಗಿದ್ದು ರೈತರು ಮಳೆಯಿಲ್ಲದೇ ಕಂಗಾಲಾಗಿದ್ದಾರೆ. ಸಾಮಾನ್ಯ ಜನರು ಉರುವಲಿಗಾಗಿ ಬಳಸುತ್ತಿದ್ದ ಸೌದೆ ಸಹ ದೊರಕದಾಗಿ ತಮ್ಮ ಜಮೀನುಗಳಲ್ಲಿದ್ದ ಹುಣಸೇ, ಮಾವು ಮತ್ತು ಹಲಸಿನ ಮರಗಳನ್ನು ಕಡಿದಿರುವುದರಿಂದ ಇಂದು ಇಡೀ ತಾಲ್ಲೂಕು 'ಒಣಮಹೋತ್ಸವ'ವನ್ನು ಆಚರಿಸುತ್ತಿದೆ.

ಟಿಬೆಟಿಯನ್ನರಿಂದ ಸಂಹರಿಸಲ್ಪಟ್ಟ ಅರಣ್ಯದಿಂದ ಮಳೆರಾಯನ ಆಗಮನವೂ ಅಪರೂಪವಾಗಿರುವುದರ ಜೊತೆಗೆ ತಾಲ್ಲೂಕು ಪಡ್ಡೆ ಹುಡುಗರು ಇವರ ಮನೆಗಳಲ್ಲಿ ಜೀತಕ್ಕೆಂದು ಸೇರುತ್ತಾರೆ.[೨] ಈ ಹುಡುಗರಿಗೆ ಮನೆಯಲ್ಲಿ ತಯಾರಿಸುವ 'ಚಾಂಗ್' ಮದ್ಯವನ್ನು ಕೊಡುವುದಲ್ಲದೇ ಧೂಮಪಾನಕ್ಕಾಗಿ 'ಭಂಗಿ' ಸೊಪ್ಪನ್ನು ಸರಬರಾಜು ಮಾಡುತ್ತಾರೆ. ಇದರ ಮೋಜಿಗೆ ಬಲಿಯಾಗಿರುವ ಈ ಅಮಾಯಕ ಹುಡುಗರು ವರ್ಷವಿಡೀ ಅವರು ಕೊಡುವ ಅಲ್ಪಸ್ವಲ್ಪ ಹಣಕ್ಕೂ ಹಾಗೂ ಚಾಂಗ್ ಮತ್ತು ಭಂಗಿ ಸೊಪ್ಪಿನ ಬೀಡಿಗೂ ಆಕರ್ಷಿತರಾಗಿ ಜೀತದಾಳುಗಳಂತೆ ದುಡಿಯುತ್ತಿದ್ದಾರೆ. ಇದೊಂದು ಅನಿಷ್ಟ ಪದ್ಧತಿಯೆಂದು ಸಭೆ-ಸಮಾರಂಭಗಳಲ್ಲಿ ಭಾಷಣ ಬಿಗಿಯುವ ನಮ್ಮ ನಾಯಕರಿಗೆ ಇದರ ಬಗ್ಗೆ ಕಾಳಜಿಯೇ ಇಲ್ಲವೆಂಬಂತೆ ಕಾಣುತ್ತದೆ. ಇದನ್ನೆಲ್ಲಾ ವೀಕ್ಷಿಸಿದಾಗ ಟಿಬೆಟಿಗರ ಪುನರ್ವಸತಿ ಕೇಂದ್ರಗಳು 'ಜೀತಪದ್ಧತಿಯ ಆಶ್ರಯತಾಣ'ಗಳಾಗಿ ಮಾರ್ಪಟ್ಟಿದೆ. ಮತ್ತು ಹೆಚ್ಚಿನ ರೀತಿಯಲ್ಲಿ ಮಾರ್ಪಾಟಾಗುತ್ತಿವೆ.

ಈ ಪುನರ್ವಸತಿ ಕೇಂದ್ರಗಳಲ್ಲಿ ನಮ್ಮ ತಾಲ್ಲೂಕಿನ ಜನರು ಮಾತ್ರವೇ ಜೀತದಾಳುಗಳಾಗಿ ದುಡಿಯುತ್ತಿರುವುದರ ಜೊತೆಗೆ ಬಿಹಾರ್, ಒರಿಸ್ಸಾ ಮುಂತಾದ ರಾಜ್ಯಗಳಿಂದ ಅಮಾಯಕ ಹುಡುಗರನ್ನು ಕರೆತಂದು ಊಟ-ತಿಂಡಿಗಳಿಗೆ ಮಾರುಹೋಗುವಂತೆ ಮಾಡಿ ಜೀತದಾಳುಗಳಂತೆ ದುಡಿಸಿಕೊಳ್ಳುತ್ತಿದ್ದಾರೆ. ಇದಕ್ಕೆ ನಿದರ್ಶನವೆಂದರೆ ೧೯೯೯ರಲ್ಲಿ ಮೈಸೂರು ಬಸ್ ನಿಲ್ದಾಣದಲ್ಲಿ ಕೆಲವು ಬಿಹಾರಿ ಯುವಕರನ್ನು ಕರೆದೊಯ್ಯುತ್ತಿದ್ದ ಟಿಬೆಟಿಗನನ್ನು ಬಂಧಿಸಿದ್ದನ್ನು ಸ್ಮರಿಸಬಹುದು. ಪರಕೀಯರಾದ ಟಿಬೆಟಿಗರು ವ್ಯಾಪಾರ, ವ್ಯವಸಾಯ ಮತ್ತು ಕಾಳಸಂತೆ ಮುಂತಾದವುಗಳಲ್ಲಿ ನಿರತರಾಗಿದ್ದು ಅನಿವಾರ್ಯವಾದಾಗ 'ಲಾಮ'ಗಳಾಗಿ ದೀಕ್ಷೆ

೧. ಪ್ರಪಂಚದ ಮೇಲ್ಛಾವಣಿ ಟಿಬೆಟ್: ಲೇಖಕರು: ಎಚ್.ಸಿ.ಲೋಹಿತಾಶ್ವ, ಪು. ೪೫.
೨. ಶಿವಸಂಪದ: ಸಂ. ಡಾ. ಪಿ.ಕೆ.ರಾಜಶೇಖರ, ಪು. ೮.

ತೆಗೆದುಕೊಂಡು ಪುನರ್ವಸತಿ ಕೇಂದ್ರಗಳಲ್ಲಿಯೇ ಉಳಿಯುತ್ತಾರೆ. ಆದರೆ ನಮ್ಮವರು ಅವರು ಕೊಡುವ ಊಟ, ತಿಂಡಿ, ಕುಡಿತ ಹಾಗೂ ಆಕರ್ಷಣೀಯ ಕೂಲಿಗಳಿಗೆ ಮಾರುಹೋಗಿ ತಮ್ಮ ಜಮೀನಿನಲ್ಲಿ ಎಷ್ಟೇ ಕೆಲಸವಿದ್ದರೂ ಅದನ್ನು ಲೆಕ್ಕಿಸದೇ ಅವರ ಮನೆಗಳಿಗೆ ಹೋಗಿ ದಾಸರಂತೆ, ಗುಲಾಮರಂತೆ ದುಡಿಯುತ್ತಾರೆ.[೧]

ಟಿಬೆಟಿಯನ್ನರು ಬಂದಂದಿನಿಂದ ಸಾಮಾನ್ಯ ರೈತರು ಕೂಲಿಗಳನ್ನು ಕರೆದುಕೊಂಡು ಕೆಲಸ ಮಾಡಿಸಲು ತುಂಬಾ ದುಬಾರಿ ಎನಿಸುತ್ತಿದೆ. ಏಕೆಂದರೆ ಕೂಲಿಯ ದರ ಹೆಚ್ಚಾಗಿರುವುದೇ ಇದಕ್ಕೆ ಕಾರಣ.[೨] ಅಂತೆಯೇ ರಸ್ತೆ ಬದಿಯಲ್ಲಿದ್ದ ಅಲ್ಪಸ್ವಲ್ಪ ರೈತರ ಜಮೀನುಗಳನ್ನು ಅತ್ಯಂತ ಹೆಚ್ಚು ಬೆಲೆಯಲ್ಲಿ ಕೊಂಡುಕೊಂಡು ಅವರನ್ನು ಬೀದಿಪಾಲು ಮಾಡುತ್ತಿದ್ದಾರೆ. ಒಂದು ಎಕರೆಗೆ ಕನಿಷ್ಠ ಬೆಲೆ ಎಂದರೆ ೧ ಲಕ್ಷದಿಂದ ೨ ಲಕ್ಷದವರೆಗಿದೆ. ಟಿಬಿಟಿಯನ್ನರು ಬಂದು ೪೪ ವರ್ಷಗಳಾದರೂ ಭಾರತ ಸರ್ಕಾರ ಅವರಿಗೆ ಯಾವುದೇ ಹಕ್ಕು ಬಾಧ್ಯತೆಗಳನ್ನು ನೀಡಿಲ್ಲ, ಕೆಲವು ಶ್ರೀಮಂತ ಟಿಬೆಟಿಯನ್ನರಿಗೆ ಪೌರತ್ವ ಸಿಕ್ಕಿದೆ. ಅಂತಯೇ ಕೊಂಗ್ವು ಜಾತಿಯವನಾದ 'ವಂಗೆ' ಎಂಬುವನ ಮಗನಿಗೆ ಮತ ಚಲಾಯಿಸುವ ಹಕ್ಕಿದೆ. ಇವನು ಪ್ರತಿ ಮತದಾನ ಸಂದರ್ಭದಲ್ಲೂ ಮತಗಟ್ಟೆಗೆ ಬಂದು ಮತ ಚಲಾಯಿಸುತ್ತಾನೆ. ಕೆಲವು ವರ್ಷಗಳ ಹಿಂದೆ ರಾಜಕೀಯ ಹಕ್ಕಿಗಾಗಿ ಇವರು ಬೇಡಿಕೆಯನ್ನು ಮುಂದಿಟ್ಟಿದ್ದರು. ಒಂದು ವೇಳೆ ಅವರಿಗೆ ಈ ಹಕ್ಕನ್ನು ನೀಡಿದ್ದೇ ಆದಲ್ಲಿ ಮೊದಲೇ ದಾಸರಂತೆ ಹಣದ ಆಮಿಷಕ್ಕೆ ಒಳಗಾಗುವ ಅಕ್ಕಪಕ್ಕದ ಕನ್ನಡಿಗರು ಅವರ ಜೊತೆಗೂಡುವುದರಲ್ಲಿ ಸಂದೇಹವಿಲ್ಲ. ಈಗಲೂ ಆಗುತ್ತಿರುವುದಿಷ್ಟೆ: ತಮ್ಮ ಕೆಲಸವಿದ್ದಾಗ ಆಕರ್ಷಕ ಕೂಲಿ ನೀಡಿ ಕೆಲಸ ಮಾಡಿಸಿಕೊಳ್ಳುತ್ತಾರೆ. ಅನಂತರ ಅವರನ್ನು ನೀನು ಯಾರೆಂದೂ ಮಾತನಾಡಿಸುವುದಿಲ್ಲ. ಇನ್ನಾದರೂ ಕನ್ನಡಿಗರು ತಮ್ಮ ದಾಸ್ಯದ ಬುದ್ಧಿಯನ್ನು ಬಿಟ್ಟು ಸ್ವತಂತ್ರ ಜೀವನವನ್ನು ನಡೆಸಿಕೊಂಡು ಹೋಗಲಿ. ಅನ್ಯರ ಗುಲಾಮರಾಗದೆ ತಮ್ಮ ಘನತೆ, ಗೌರವ, ಪ್ರತಿಷ್ಠೆಗಳನ್ನು ಮೆರೆಯಲಿ.[೩]

ಹೀಗೆ ಟಿಬೆಟಿಯನ್ನರ ಆಗಮನದಿಂದಾಗಿ ತಾಲ್ಲೂಕಿಗೆ ಸಾಧಕಗಳಿಗಿಂತ ಬಾಧಕಗಳೇ ಹೆಚ್ಚಾಗಿವೆ. ಹೀಗೆ ಮುಂದುವರಿದಲ್ಲಿ ಅಕ್ಕಪಕ್ಕದ ಕನ್ನಡಿಗರ ಸ್ಥಿತಿ ಶೋಚನೀಯವಾಗುವುದರಲ್ಲಿ, ಅಂತೆಯೇ ಈ ಪುನರ್ವಸತಿ ಕೇಂದ್ರಗಳು ಜೀತ ಪದ್ಧತಿಯ ಆಶ್ರಯತಾಣಗಳಾಗಿ ಮಾರ್ಪಾಡಾಗುವುದರಲ್ಲಿ ಯಾವ ಸಂದೇಹಗಳಿಲ್ಲ.

---

೧. ಶಿವಸಂಪದ: ಸಂ. ಡಾ.ಪಿ.ಕೆ.ರಾಜಶೇಖರ, ಪು. ೬.
೨. ಪ್ರಪಂಚದ ಮೇಲ್ಛಾವಣಿ ಟಿಬೆಟ್: ಲೇಖಕರು: ಎಚ್.ಸಿ.ಲೋಹಿತಾಶ್ವ, ಪು. ೪೬.
೩. ಶಿವಸಂಪದ: ಸಂ. ಡಾ.ಪಿ.ಕೆ.ರಾಜಶೇಖರ, ಪು. ೧೦.

# ಅಧ್ಯಾಯ – ೪

# ಟಿಬೆಟ್ಟಿಯನ್ನರ ಸಾಂಸ್ಕೃತಿಕ ಕೊಡುಗೆಗಳು

ನಿರಾಶ್ರಿತರಾಗಿ ಬಂದು ನೆಲೆಸಿ ತಮ್ಮದೇ ಆದ ಛಾಪನ್ನು ನಿರ್ಮಿಸಿ ಜಗತ್ತಿನಾದ್ಯಂತ ಪ್ರಸಿದ್ಧಿ ಪಡೆಯುವಂತಹ ಸಾಧನೆಯನ್ನು ಟಿಬೆಟಿಯನ್ನರು ಮಾಡಿದ್ದಾರೆ. ಇವರು ಬಹಳ ಉತ್ಕೃಷ್ಟವಾದ ಕಲಾತ್ಮಕವಾದ ಸಂಸ್ಕೃತಿಯನ್ನು ಬೆಳೆಸಿದ್ದಾರೆ. ಬೈಲುಕುಪ್ಪೆ ಟಿಬೆಟಿಯನ್ನರ ಪುನರ್ವಸತಿ ಕೇಂದ್ರಗಳಲ್ಲಿ ನಿರ್ಮಾಣವಾಗಿರುವ ದೇವಾಲಯಗಳು ಬಹು ಸುಂದರವಾಗಿವೆ. ಈ ದೇವಾಲಯಗಳ ಒಳಹೊಕ್ಕು ನೋಡಿದರೆ ಅರಮನೆಯಲ್ಲಿರುವ ಕೆತ್ತನೆಗಳಂತೆ ವರ್ಣರಂಜಿತ ಚಿತ್ರಗಳಂತೆ ಕಂಗೊಳಿಸುತ್ತವೆ. ಇತ್ತೀಚೆಗೆ ನಿರ್ಮಾಣವಾಗಿರುವ ನಾಲ್ಕನೇ ಶಿಬಿರದ ದೇವಾಲಯ ನಿಜಕ್ಕೂ ಅದ್ಭುತ ಹಾಗೂ ರಮಣೀಯ. ಈ ದೇವಾಲಯದ ಒಳಗೆ ೩೦ ಅಡಿ ಎತ್ತರದ ಪೀಠಗಳಲ್ಲಿ ಪದ್ಮಸಂಭವ ಬುದ್ಧ ಹಾಗೂ ಅಮಿತಾಭಾ ಅವರ ಚಿನ್ನ ಲೇಪಿಸಿದ ವಿಗ್ರಹಗಳಿವೆ. ಈ ದೇವಾಲಯದ ನಿರ್ಮಾಣಕ್ಕೆ ತಗುಲಿರುವ ವೆಚ್ಚ ೧೭ ಕೋಟಿ ರೂಪಾಯಿಗಳು. ಈ ದೇವಾಲಯದ ಗುತ್ತಿಗೆದಾರ ರಾಮಶೆಟ್ಟಿ ಕುಶಾಲನಗರದವರಾಗಿದ್ದು, ಅವರಿಗೆ ಅರ್ಧ ಕೆಜಿ ಚಿನ್ನ ಹಾಗು ೧೨ ಲಕ್ಷ ಹಣವನ್ನು ಉಡುಗೊರೆಯಾಗಿ ನೀಡಿದ್ದಾರೆ. ಮತ್ತೆ ಲಾಮಾ ಕಾಲೋನಿಯಲ್ಲಿ ಸುಮಾರು ೮ ಎಕರೆ ಪ್ರದೇಶದಲ್ಲಿ ನಿರ್ಮಾಣವಾಗಿರುವ ಸೆರಾಜಿ ಬೌದ್ಧ ವಿಹಾರ ವಿಶ್ವವಿದ್ಯಾಲಯವೂ ಸಹ ಅದ್ಭುತವಾಗಿದೆ. ಪಿರಿಯಾಪಟ್ಟಣ ತಾಲ್ಲೂಕಿನಲ್ಲಿ ಇಂತಹ ದೇವಾಲಯಗಳಿವೆ ಎಂದರೆ ಎಂಥವರಿಗೂ ಆಶ್ಚರ್ಯವನ್ನುಂಟು ಮಾಡುತ್ತದೆ. ಪ್ರತಿಯೊಂದು ಕಾಲೋನಿಯಲ್ಲಿ ಅವರವರ ಪಂಗಡದ ದೇವಾಲಯಗಳಿವೆ.

### ೧. ನಾಮ್‌ಡ್ರೋಲಿಂಗ್ ಬೌದ್ಧ ವಿಹಾರ:

ಪರಮ ಪೂಜ್ಯ ಪೆನೋರ್‌ರಿನ್‌ಪೋಚೆಯವರು ಈ ಬೌದ್ಧವಿಹಾರವನ್ನು ೧೯೬೩ರಲ್ಲಿ ಸ್ಥಾಪಿಸಿದಾಗ ಇಲ್ಲಿ ಕೇವಲ ೧೦ ಬೌದ್ಧಭಿಕ್ಷುಗಳು ಇದ್ದರು. ಕ್ರಮೇಣವಾಗಿ ಇವರ ದಾಖಲಾದ ಸಂಖ್ಯೆ ೫೬೪೩ಕ್ಕೆ ಏರಿತು. ಇವರಲ್ಲಿ ೩೦೦೦ ಭಿಕ್ಷುಗಳು ಈ ವಿಹಾರದಲ್ಲಿ ಈಗ ವಾಸಿಸಿ ಧರ್ಮದ ಅಧ್ಯಯನ ಮಾಡುತ್ತಿದ್ದಾರೆ. ಈ ಭಿಕ್ಷುಗಳು ಸಿಕ್ಕಿಂ, ಆಂಧ್ರಪ್ರದೇಶ, ಹಿಮಾಚಲಪ್ರದೇಶ, ಪಶ್ಚಿಮ ಬಂಗಾಳ, ಅರುಣಾಚಲ ಪ್ರದೇಶ ಮತ್ತು ಅಸ್ಸಾಂ ಅಲ್ಲದೆ ಇತರ ರಾಷ್ಟ್ರಗಳಿಂದಲೂ ಆಗಮಿಸಿದ್ದಾರೆ. ಈ

ಬೌದ್ಧವಿಹಾರದಲ್ಲಿ ಆಲಿಸಲು ಮತ್ತು ಧ್ಯಾನಮಾಡಲು ಅನೇಕ ವಿಭಾಗಗಳಿವೆ.[೧] ಅವುಗಳು ಯಾವುವೆಂದರೆ ಪ್ರಾಥಮಿಕ ಶಾಲೆ, ಶಾಸ್ತ್ರೋಕ್ತಕರ್ಮ ಮತ್ತು ಧರ್ಮಾಚರಣೆಯನ್ನು ಮಾಡುವ ಡ್ರತ್ಸಾಂಗ್. ಈ ಸಂಸ್ಥೆ ಧರ್ಮದ ಬಗ್ಗೆ ತೀವ್ರ ಧ್ಯಾನ ಮಾಡುವ ಕೇಂದ್ರ. ಸಂನ್ಯಾಸಿನಿಯರ ಬೌದ್ಧವಿಹಾರ, ಬೌದ್ಧಭಿಕ್ಷುಗಳ ಮಹಾವಿದ್ಯಾಲಯ ಮತ್ತು ಸ್ವರ್ಣದೇವಸ್ಥಾನವೂ ಸೇರಿ ಇನ್ನು ಹದಿನಾರು ವಿವಿಧ ದೇವಾಲಯಗಳು ಈ ಬೌದ್ಧವಿಹಾರದಲ್ಲಿ ಇವೆ. ಈ ಬೌದ್ಧವಿಹಾರದಲ್ಲಿ ಒಂದು ಪ್ರಧಾನ ಹಾಗೂ ಮೂರು ವಿಭಾಗೀಯ ಪುಸ್ತಕಾಲಯಗಳು, ಒಂದು ಕಛೇರಿ, ಸಂಪಾದಕೀಯ ಸಮಿತಿ, ಗಣಕಯಂತ್ರ ವಿಭಾಗ, ವಸತಿಗೃಹಗಳು ಮತ್ತು ತರಗತಿ ಕೊಠಡಿಗಳೂ ಇವೆ. ಈ ಬೌದ್ಧವಿಹಾರದ ಸುತ್ತ ೧೩೦೦ಕ್ಕೂ ಹೆಚ್ಚು ಪ್ರಾರ್ಥನಾ ಚಕ್ರಗಳು ಇವೆ. ಇವೆಲ್ಲವೂ ಧರ್ಮಾಚರಣೆಗೆ ಬೆಂಬಲವಾಗಿವೆ. ಈ ಸ್ವರ್ಣಮಂದಿರದಿಂದ ಒಂದು ಕಿಲೋಮೀಟರ್ ದೂರದಲ್ಲಿ ಒಂದು ಸನ್ಯಾಸಿನಿಯರ ಆಶ್ರಮ ಮತ್ತು ಸನ್ಯಾಸಿನಿಯರ ಸಂಸ್ಥೆ ಇದೆ. ಇದರಲ್ಲಿ ೭೮೦ ಸನ್ಯಾಸಿನಿಯರು ದಾಖಲಾಗಿದ್ದಾರೆ. ಇವರಲ್ಲಿ ೫೩೦ಕ್ಕೂ ಹೆಚ್ಚು ಮಂದಿ ಇಲ್ಲಿ ನೆಲೆಸಿದ್ದಾರೆ. ಪರಮಪೂಜ್ಯರು ಇಲ್ಲಿಯೂ ಎಲ್ಲಾ ಭಿಕ್ಷುಗಳ ಧರ್ಮಾಚರಣೆಗಾಗಿ ಆಹಾರ, ವಸ್ತ್ರ, ವಸತಿ ಮತ್ತು ಇತರ ಅನುಕೂಲಗಳನ್ನು ದಯಪಾಲಿಸುತ್ತಿದ್ದಾರೆ.

**೨. ಈ ಪ್ರಮುಖ ದೇವಸ್ಥಾನ ಸ್ವರ್ಣದೇವಸ್ಥಾನವಾಗಿ ನಾಮಾಂಕಿತಗೊಂಡ ರೀತಿ:**

ಸ್ವರ್ಣದೇವಸ್ಥಾನ ಎಂಬ ಹೆಸರು ಈ ಬೌದ್ಧವಿಹಾರ ನೀಡಿದುದಲ್ಲ. ವರ್ತಮಾನ ಪತ್ರಿಕೆಗಳಲ್ಲಿ ಈ ಹೆಸರು ಆಗಾಗ್ಗೆ ಬರುತ್ತಿದ್ದರಿಂದ ಈ ಮಂದಿರಕ್ಕೆ ಸ್ವರ್ಣದೇವಸ್ಥಾನ ಎಂಬ ಹೆಸರು ಬಂದಿತು. ಈ ದೇವಸ್ಥಾನದ ನಿಜವಾದ ಹೆಸರಾದ ಪದ್ಮಸಂಭವ ಬೌದ್ಧವಿಹಾರವನ್ನು ಕನ್ನಡ ಮತ್ತು ಆಂಗ್ಲಭಾಷೆಯಲ್ಲಿ ಈ ದೇವಸ್ಥಾನದ ಮುಖ್ಯ ದ್ವಾರದಲ್ಲಿ ನಮೂದಿಸಲಾಗಿದೆ.[೨]

೧೯೯೯ನೇ ಇಸವಿಯಲ್ಲಿ ಪರಮ ಪೂಜ್ಯಪೆನೋರ್‌ರಿನ್ ಪೋಚೆಯವರ ಮನವಿಯ ಮೇರೆಗೆ ಪರಮಪೂಜ್ಯ ದಲೈಲಾಮರವರು, ಕರ್ನಾಟಕದ ಪ್ರತಿನಿಧಿಯಾಗಿ ರಾಜ್ಯದ ಸಹಕಾರ ಮಂತ್ರಿ ಶ್ರೀ ಎಸ್.ಆರ್.ರವರು, ಐಜೆಪಿ ಶ್ರೀ ಧರ್ಮಪಾಲ್ ನೇಗಿಯವರು ಮತ್ತು ಹಲವಾರು ಹಿರಿಯ ಅಧಿಕಾರಿಗಳ ಮತ್ತು ಬೃಹತ್ ಸಾರ್ವಜನಿಕರ ಸಮ್ಮುಖದಲ್ಲಿ ಈ ಸ್ವರ್ಣಮಂದಿರದ ಉದ್ಘಾಟನೆ ನೆರವೇರಿತು. ಈ

೧. ಸ್ವರ್ಣದೇವಸ್ಥಾನ (Golden Temples) ಕನ್ನಡಕ್ಕೆ ಅನುವಾದ – ಡಿ.ಎನ್.ಪುರುಷೋತ್ತಮರಾವ್, ಪುಟ. ೬೫.

೨. ಅದೇ., ಪುಟ. ೬೬.

ಉದ್ಘಾಟನಾ ಸಮಾರಂಭದ ಕಾರ್ಯಕ್ರಮಗಳನ್ನು ಪ್ರಮುಖ ಟೆಲಿವಿಶನ್ ಸಂಸ್ಥೆಗಳಾದ ಸ್ಟಾರ್‌ಪ್ಲಸ್, ಆಜ್‌ತಕ್, ಜೀನ್ಯೂಸ್ ಮತ್ತು ಸೋನಿನ್ಯೂಸ್‌ಯವರು ಬಿತ್ತರಿಸಿದರು. ಅಲ್ಲದೆ ವರ್ತಮಾನ ಪತ್ರಿಕೆಗಳಲ್ಲಿಯೂ ಈ ವಿವರ ಪ್ರಕಟವಾಯಿತು.

ಪ್ರವಾಸದ ಕೈಪಿಡಿಗಳಲ್ಲಿ ಈ ದೇವಸ್ಥಾನವನ್ನು ಸ್ವರ್ಣಮಂದಿರ ಎಂದು ನಮೂದಿಸಿದ್ದಾರೆ. ಆದ್ದರಿಂದ ಪ್ರತಿ ಪ್ರವಾಸಿಯೂ ಈ ಸ್ಥಳಕ್ಕೆ ಬಂದಾಗ ಈ ಮಂದಿರದ ಹೆಸರಾದ ಪದ್ಮಸಂಭವ ಬೌದ್ಧವಿಹಾರದ ಬಗ್ಗೆ ಕೇಳದೆ ಸ್ವರ್ಣಮಂದಿರದ ಬಗ್ಗೆ ಕೇಳುತ್ತಾರೆ. ಈ ಸಮಸ್ಯೆಯ ಮತ್ತು ಪ್ರವಾಸಿಗರ ಅನುಕೂಲಕ್ಕಾಗಿ ಈ ಮಂದಿರಕ್ಕೆ ನಾಮ್‌ಡ್ರೊಲಿಮಗ್ ಬೌದ್ಧವಿಹಾರದ ಸ್ವರ್ಣದೇವಸ್ಥಾನ ಎಂದು ಮುಖ್ಯರಸ್ತೆಯ ಪ್ರಕಟಣಾ ಫಲಕಗಳಲ್ಲಿ ನಮೂದಿಸಲಾಗಿದೆ. ಈ ಮಂದಿರಕ್ಕೆ ಪರಮಪೂಜ್ಯ ಪೆನೋರ್‌ರಿನ್‌ಪೋಚೆ. ಸ್ವರ್ಣದೇವಸ್ಥಾನ ಎಂದು ಹೆಸರಿಸಲಿಲ್ಲವಾದರೂ, ಟೆಲಿವಿಶನ್ ಮತ್ತು ವರ್ತಮಾನ ಪತ್ರಿಕೆಗಳ ಮೂಲಕ ಸ್ವರ್ಣಮಂದಿರದ ಹೆಸರು ಚಿರಪರಿಚಿತವಾಯಿತು.[೧]

### ೩. ಸ್ವರ್ಣದೇವಸ್ಥಾನ ಪದ್ಮಸಂಭವ ಬೌದ್ಧವಿಹಾರ

ಪರಮಪೂಜ್ಯ ಪೆನೋರ್‌ರಿನ್ ಪೋಚೆಯವರ ಈ ಸ್ವರ್ಣ ದೇವಸ್ಥಾನವನ್ನು ೧೯೯೫ರಲ್ಲಿ ನಿರ್ಮಾಣ ಮಾಡಲು ಆರಂಭಿಸಿ ಈ ಮಹತ್ಕಾರ್ಯವನ್ನು ೧೯೯೯ರಲ್ಲಿ ಪೂರ್ಣಗೊಳಿಸಿದರು. ಈ ದೇವಸ್ಥಾನವು ಟಿಬೆಟ್ ದೇಶದ ಸಂಪ್ರದಾಯಗಳಿಗೆ ಅನುಗುಣವಾಗಿ ನಿರ್ಮಾಣಗೊಂಡು ಉತ್ಕೃಷ್ಟ ಚಕ್ರಗಳು ಮತ್ತು ಶಿಲ್ಪಕಲಾಕೃತಿಗಳಿಂದ ಅಲಂಕೃತಗೊಂಡಿದೆ. ಹೊರನಾಡಿನ ಟಿಬೆಟಿಯನ್ನರ ಸಮಾಜದಲ್ಲಿ ಈ ಸ್ವರ್ಣದೇವಸ್ಥಾನ ಒಂದು ಅಸಾಧಾರಣ ದೇವಸ್ಥಾನವೆಂದು ಅಭಿಪ್ರಾಯಪಡಲಾಗಿದೆ. ಈ ದೇವಸ್ಥಾನದ ಪರಿಸರದ ಭವ್ಯ ಭೂದೃಶ್ಯವನ್ನು ಬುದ್ಧಧರ್ಮ ಮತ್ತು ಸಂಘಕ್ಕೆ ಕಾಣಿಕೆಯಾಗಿ ಸೃಷ್ಟಿಸಲಾಗಿದೆ. ಅಲ್ಲದೆ ಸಂದರ್ಶಕರಿಗೆ ಹಾಗೂ ಇಲ್ಲಿಯ ನಿವಾಸಿಗಳಿಗೆ ಉತ್ತೇಜನ, ಸ್ಫೂರ್ತಿ ಮತ್ತು ಶಾಂತಿ ನೀಡುವುದಕ್ಕಾಗಿಯೇ ಆಗಿದೆ. ಈ ಉದ್ದೇಶಗಳನ್ನೆಲ್ಲಾ ಮನಸ್ಸಿನಲ್ಲಿರಿಸಿಕೊಂಡು ಸಂದರ್ಶಕರು ದಯವಿಟ್ಟು ಈ ಪರಿಸರವನ್ನು ಸ್ವಚ್ಛವಾಗಿಯೂ ಮತ್ತು ಶಾಂತಿಯುತವಾಗಿಯೂ ಪೋಷಿಸಲು ಸಹಕರಿಸಬೇಕೆಂದು ಕೇಳಿಕೊಳ್ಳಲಾಗಿದೆ. ಈ ಸ್ಥಳದಲ್ಲಿ ತಮ್ಮ ಧರ್ಮವನ್ನು ಇತರರಿಗೆ ತೊಂದರೆ ಇಲ್ಲದೆ ಶ್ರದ್ಧೆಯಿಂದ ಆಚರಿಸಬಹುದಾಗಿದೆ. ಈ ಸ್ಥಳದಲ್ಲಿ ತಾವು ಖಂಡಿತ

---

೧. ಸ್ವರ್ಣದೇವಸ್ಥಾನ (Golden Temples) ಕನ್ನಡಕ್ಕೆ ಅನುವಾದ – ಡಿ.ಎನ್.ಪುರುಷೋತ್ತಮರಾವ್, ಪುಟ. ೬೭.

ಮನಸ್ಸಿಗೆ ಅಹಿತಕರ ಘಟನೆ ಆಗಿ, ತಮಗೆ ತೊಂದರೆಯಾದಲ್ಲಿ ನಾವು ನಿಮ್ಮಲ್ಲಿ ಕ್ಷಮೆಯನ್ನು ಯಾಚಿಸುತ್ತೇವೆ ಎಂದು ಹೇಳಲಾಗಿದೆ.[೧]

**೪. ಮೂರು ಬೃಹತ್ ಪ್ರಧಾನ ಮೂರ್ತಿಗಳು:**

ಈ ಮಂದಿರದ ಮಧ್ಯದ ಮೂರ್ತಿಯು ಬೌದ್ಧಮತದ ಸಂಸ್ಥಾಪಕರಾದ ಭಗವಾನ್ ಬುದ್ಧ ಶಾಕ್ಯಮುನಿಯವರನ್ನು ಪ್ರತಿನಿಧಿಸುತ್ತದೆ. ಇವರು ೨೫೦೦ ವರ್ಷಗಳ ಹಿಂದೆ ಇಂದಿನ ನೇಪಾಳದಲ್ಲಿರುವ ಲುಂಬಿನಿಯ ರಾಜ ಶುದ್ಧೋಧನ ಮತ್ತು ರಾಣಿ ಮಾಯಾದೇವಿಯವರಿಗೆ ಸುಪುತ್ರರಾಗಿ ಜನಿಸಿದರು.

ಈ ಅದೃಷ್ಟಶಾಲಿ ಕಲ್ಪದಲ್ಲಿ ಬರುವ ೧೦೦೨ ಬುದ್ಧರಲ್ಲಿ ಈ ಭಗವಾನ್ ಬುದ್ಧರು ನಾಲ್ಕನೆಯವರೆಂದು ಅಭಿಪ್ರಾಯಪಡಲಾಗಿದೆ. ಬಹು ಹಿಂದಿನ ಕಾಲದಿಂದ ಎಲ್ಲರಿಗೂ ಬಾಧೆ ಕೊಡುತ್ತಿರುವ ಜನನ ಮರಣಗಳೆಂಬ ಚಕ್ರದಿಂದ ಬಿಡಿಸಿ ಶಾಶ್ವತ ಪರಿಹಾರ ಹುಡುಕಲು ರಾಜಕುಮಾರ ಸಿದ್ಧಾರ್ಥ ತನ್ನ ೨೯ನೇ ವಯಸ್ಸಿನಲ್ಲಿ ಅರಮನೆ ವೈಭೋಗವನ್ನು ಸ್ವಇಚ್ಛೆಯಿಂದ ಬಿಟ್ಟು ಹೊರಟನು. ಬಹು ವರ್ಷಗಳ ತೀವ್ರ ಧ್ಯಾನಾಚರಣೆಯಿಂದ ಸಿದ್ಧಾರ್ಥನು ಬುದ್ಧಗಯಾದಲ್ಲಿ ಬೋಧಿವೃಕ್ಷದ ಕೆಳಗೆ ಜ್ಞಾನೋದಯ ಪಡೆದು ಬುದ್ಧನಾದನು.[೨]

ಭಗವಾನ್ ಬುದ್ಧನು ೪೦ ವರ್ಷಗಳಿಗೂ ಹೆಚ್ಚಾಗಿ ಮಾನವರನ್ನು ಈ ಪ್ರಪಂಚದ ದುಃಖ ಮತ್ತು ನೋವಿನಿಂದ ಮೇಲ್ತಂದು ಅವರ ಸಾಮರ್ಥ್ಯವನ್ನು ಪರಿಪೂರ್ಣವಾಗಿ ಪೂರ್ಣಪ್ರಮಾಣದಲ್ಲಿ ಪ್ರಕಟ ಮಾಡುವಂತೆ ಮಾಡಿ ಅವರು ಪರಮ ಶ್ರೇಷ್ಠಜ್ಞಾನ ಪಡೆಯಲು ಮತ್ತು ಪೂರ್ಣ ಸಾಮರ್ಥ್ಯದತ್ತ ಸಾಗಲು ಅನುಕೂಲವಾಗುವಂತೆ ಮೂರು ಶ್ರೇಷ್ಠ ಧರ್ಮಚಕ್ರಗಳನ್ನು ತಿರುಗಿಸಿದನು. ವಿವಿಧ ಮನೋಭಾವದ ವ್ಯಕ್ತಿಗಳಿಗೆ ಹೊಂದಿಕೊಳ್ಳುವ ಭಗವಾನ್ ಬುದ್ಧರ ಮಹತ್ವದ ಬೋಧನೆಗಳನ್ನು ಸರಳವಾಗಿ ಎರಡು ವಿಭಾಗಗಳಾಗಿ ವಿಂಗಡಿಸಬಹುದು. ಅವುಗಳು ಯಾವುವು ಎಂದರೆ ಮಹತ್ತರ ಪರಸ್ಪರ ಅವಲಂಬನೆಯ ಸಂಗತಿ ಮತ್ತು ಅಹಿಂಸೆಯ ವರ್ತನೆ. ಭಗವಾನ್ ಬುದ್ಧರ ಮಧ್ಯಮ ಮಾರ್ಗದ ಬೋಧನೆ ಅಂದಿನಿಂದ ಇಂದಿಗೂ ಕೋಟ್ಯಂತರ ಜನರಿಗೆ ಸ್ಫೂರ್ತಿ ಕೊಡುತ್ತಲೇ ಇದೆ.

---

೧. ಸ್ವರ್ಣದೇವಸ್ಥಾನ (Golden Temples) ಕನ್ನಡಕ್ಕೆ ಅನುವಾದ – ಡಿ.ಎನ್.ಪುರುಷೋತ್ತಮ ರಾವ್, ಪುಟ. ೬೭.

೨. ಅದೇ

**ಶಾಕ್ಯಮುನಿ ಭಗವಾನ್ ಬುದ್ಧರ ಎಡಗಡೆ ಸ್ಥಾಪಿಸಲ್ಪಟ್ಟ ಗುರು ಪದ್ಮಸಂಭವ ಅವರ ಮೂರ್ತಿ.** ಇವರನ್ನು ಗುರುರಿನ್‌ಪೋಚೆ ಎಂತಲೂ ಜನರು ಕರೆಯುತ್ತಾರೆ.

ಭಗವಾನ್ ಬುದ್ಧರ ಭವಿಷ್ಯವಾಣಿಯಂತೆ ಗುರುರಿನ್‌ಪೋಚೆ ಬುದ್ಧರ ದೈವಾಧೀನರಾದ ಬಳಿಕ ೧೨ ವರ್ಷದ ನಂತರ ಇಂದಿನ ಆಫ್‌ಘಾನಿಸ್ತಾನ ಮತ್ತು ಪಾಕಿಸ್ತಾನ ಗಡಿಪ್ರದೇಶವಾದ ಒಡ್ಡಿಯಾನದ ಸಿಂಧೂ ಎಂಬ ಸರೋವರದ ಬಳಿಯಲ್ಲಿ ಜನಿಸಿದರು. ಇವರು ಬುದ್ಧ ಅಮಿತಾಭರಿಂದ ಉದ್ಭವವಾಗಿದ್ದಾರೆಂದೂ ಅಭಿಪ್ರಾಯಪಡಲಾಗಿದೆ.[೧]

ಇವರು ವಜ್ರಯಾನ ಮಹಾಯಾನ ಬೌದ್ಧಧರ್ಮದ ದೀಕ್ಷೆ ಪಡೆದವರಿಗಾಗಿ ಬೋಧಿಸುವ ಗೋಪ್ಯಜ್ಞಾನದಲ್ಲಿ ಉತ್ಕೃಷ್ಟತೆಯನ್ನು ಪಡೆದರು. ಇವರನ್ನು ಹಿಮದ ನಾಡಾದ ಟಿಬೆಟ್‌ಗೆ ೮ನೇ ಶತಮಾನದಲ್ಲಿ ೩೮ನೇ ಟಿಬೆಟಿಯನ್ ದೇಶದ ರಾಜನಾದ ಟ್ರಿಸೋಂಗ್‌ಡೆವುತ್ಸೆನ್ ಬೌದ್ಧಧರ್ಮವನ್ನು ಸ್ಥಾಪಿಸಲು ಆಹ್ವಾನಿಸಿದರು. ಗುರುರಿನ್‌ಪೋಚೆಯವರು ಅಲ್ಲಿ ಬೌದ್ಧಧರ್ಮವನ್ನು ಸ್ಥಾಪಿಸಲು ಅಡ್ಡಿಪಡಿಸುತ್ತಿದ್ದ ದುಷ್ಟಶಕ್ತಿಗಳನ್ನು ನಿಗ್ರಹಿಸಿ ಟಿಬೆಟ್ ದೇಶದಲ್ಲಿ ಬೌದ್ಧಧರ್ಮವನ್ನು ಸ್ಥಾಪಿಸಿದರು. ಗುರುರಿನ್‌ಪೋಚೆಯವರು ಟಿಬೆಟಿಯನ್ನರ ಮೇಲೆ ತೋರಿದ ಅಪರಿಮಿತ ಅನುಕಂಪದಿಂದ ಬೌದ್ಧಧರ್ಮದ ದೀಕ್ಷೆ ಪಡೆದವರಿಗಾಗಿ ಬೋಧಿಸುವ ಗೌಪ್ಯಜ್ಞಾನ ಮತ್ತು ರಹಸ್ಯ ತಂತ್ರಬೋಧನೆಯನ್ನು ಮತ್ತು ಅಪಾರ ಸಂಪತ್ತನ್ನು ತಮ್ಮ ಕಾಲದಲ್ಲಿಯೂ ಮತ್ತು ಟಿಬೆಟಿಯನ್ನರ ಮುಂದಿನ ಜನಾಂಗದವರಿಗಾಗಿಯೂ ಗೌಪ್ಯವಾಗಿ ಇರಿಸಿದ್ದಾರೆ. ಇವರು ಟಿಬೆಟಿಯನ್ನರ ಒಳಿತಿಗಾಗಿ ಅಂದು ಇಂದು ಮತ್ತು ಮುಂದೆಯೂ ಬಹಳ ಉಪಯುಕ್ತರಾಗಿದ್ದಾರೆ. ಆದ್ದರಿಂದ ಎಲ್ಲಾ ಟಿಬೆಟಿಯನ್ನರು ಇವರನ್ನು ಸಹೃದಯಿ ಎಂದು ಗೌರವಿಸಿ ಇವರನ್ನು ೨ನೆಯ ಬುದ್ಧನೆಂದು ತಿಳಿದು ಭಯಭಕ್ತಿಗಳಿಂದ ಇಂದಿಗೂ ಪೂಜಿಸುತ್ತಿದ್ದಾರೆ. ಗುರುರಿನ್‌ಪೋಚೆಯವರು ೫೩ ವರ್ಷ ೩ ತಿಂಗಳು ಟಿಬೆಟಿನಲ್ಲಿ ಜೀವಿಸಿದ್ದರು.

**ಶಾಕ್ಯಮುನಿ ಬಲಭಾಗದ ಮೂರ್ತಿ ಬುದ್ಧ ಅಮಿತಾಯುಸ್ ಚಿರಂಜೀವಿತನ ದಯಪಾಲಿಸುವ ಭಗವಾನ್ ಬುದ್ಧ:**

ಬುದ್ಧ ಅಮಿತಾಯುಸ್, ಬುದ್ಧಸ್ಥರವನ್ನು ಅಗಣಿತ ಮನ್ವಂತರದ ಹಿಂದೆ ಸಾಧಿಸಿ ಪಡೆದುಕೊಂಡವರು ಮತ್ತು ಅವರ ಸತ್ಕಾರ್ಯಕ್ರಮ ಇಂದಿಗೂ ದೀರ್ಘ ಆಯಸ್ಸನ್ನು ದಯಪಾಲಿಸುವುದು ಮತ್ತು ಇಂದಿನ ಜೀವಾವಧಿ ಕಡಿಮೆಯಾಗುತ್ತಿರುವ

೧. ಸ್ವರ್ಣದೇವಸ್ಥಾನ (Golden Temples) ಕನ್ನಡಕ್ಕೆ ಅನುವಾದ – ಡಿ.ಎನ್.ಪುರುಷೋತ್ತಮರಾವ್, ಪುಟ. ೬೯.

ಯುಗದಲ್ಲಿ ಆ ಜೀವದ ಅವಧಿಯನ್ನು ಮುಂದುವರಿಸುವುದೇ ಆಗಿದೆ. ಬುದ್ಧ ಅಮಿತಾಯುಸ್ ಅವರು ತಮ್ಮ ಪತ್ನಿ ಭದ್ರಪಾಲಿಕೆ ಹಾಗೂ ಪುತ್ರ ಚಂದ್ರಪ್ರಭರೊಡನೆ ಮತ್ತು ಮಹಾಮಹಿಮ ನಿತ್ಯನೂತನ ಗುರು ಪರಿವಾರದೊಂದಿಗೆ ಅಪ್ಪಟ ಅಪರಿಮಿತ ಸದ್ಗುಣಗಳ ಭೂಮಿಯಲ್ಲಿ ವಾಸಿಸುತ್ತಿದ್ದಾರೆ.[೧]

ಬೌದ್ಧಧರ್ಮದ ಪ್ರಕಾರ ಜನಗಳು ಕೆಟ್ಟಕಾರ್ಯಗಳನ್ನು ಮಾಡುವುದರಿಂದ ಅವರ ಜೀವಾವಧಿ ಕಡಿಮೆಯಾಗುತ್ತಿದೆ ಮತ್ತು ಜನರು ಅಕಾಲ ಮರಣವನ್ನು ಅಪ್ಪುತ್ತಿದ್ದಾರೆ. ಇಂತಹ ಸನ್ನಿವೇಶದಲ್ಲಿ ಜನರು ಬುದ್ಧಅಮಿತಾಯುಸ್ ಅವರ ನಾಮಧೇಯವನ್ನು ಉಚ್ಚರಿಸಿದರೆ ಅವರ ಜೀವಾವಧಿ ದೀರ್ಘವಾಗುತ್ತದೆ. ಸಾವಿನ ಅಂಚಿನಲ್ಲಿರುವ ಜೀವಿಗಳು ಬುದ್ಧ ಅಮಿತಾಯುಸ್ ಅವರ ಮಂತ್ರವನ್ನು ಪಠಣಮಾಡಿ ಮತ್ತು ಅವರನ್ನು ವರ್ಣನೆ ಮಾಡಿದರೆ ಅವರ ಜೀವಾವಧಿಯೂ ದೀರ್ಘವಾಗುತ್ತದೆ.

ಬುದ್ಧ ಅಮಿತಾಯುಸ್ ಅವರ ಮೂರ್ತಿಯನ್ನು ಪ್ರತಿಷ್ಠಾಪಿಸುವುದರಿಂದ ಮಹತ್ವದ ಲಾಭಗಳು ಆಗುತ್ತವೆ. ಅಲ್ಲದೆ ಆ ಮೂರ್ತಿ ನಮ್ಮನ್ನು ಕೆಡುಕಿನಿಂದಲೂ ಮತ್ತು ಭೂತಗಳ ಕಾಟದಿಂದಲೂ ತಪ್ಪಿಸುತ್ತದೆ.

ಆ ಮೂರ್ತಿಯನ್ನು ಭಕ್ತಿಯಿಂದ ಪೂಜಿಸಿದರೆ ಅದು ನಮ್ಮ ಜೀವನಾವಧಿಯನ್ನು ಹೆಚ್ಚಿಸುತ್ತದೆ ಮತ್ತು ಮೂರ್ತಿಯನ್ನು ಪ್ರತಿಷ್ಠಾಪಿಸಿದ ಪ್ರದೇಶವು ಪರಮ ಪವಿತ್ರವಾಗಿ ಆ ಪ್ರದೇಶವು ಧರ್ಮವನ್ನು ಕಾಪಾಡಲು ಶಕ್ತಿಶಾಲಿಯಾದ ಕ್ಷೇತ್ರವಾಗುತ್ತದೆ.

ಭಗವಾನ್ ಬುದ್ಧರ ಮೂರ್ತಿಯು ಪೀಠದಿಂದ ೬೦ ಅಡಿ ಇದೆ ಮತ್ತು ಗುರು ಪದ್ಮಸಂಭವ ಮತ್ತು ಬುದ್ಧ ಅಮಿತಾಯುಸ್ ೫೮ ಅಡಿ ಇದೆ. ಅವುಗಳು ಚಿನ್ನ ಮತ್ತು ತಾಮ್ರ ಲೋಹದಿಂದ ಮಾಡಿದವುಗಳಾಗಿವೆ. ಈ ಮೂರ್ತಿಗಳ ಒಳಗೆ ಧರ್ಮಗ್ರಂಥಗಳು, ಮಹಾತ್ಮರ ಭಗ್ನಾವಶೇಷಗಳು, ಜೇಡಿಮಣ್ಣಿನ ಸ್ತೂಪಗಳು, ಎರಕದ ಅಚ್ಚುಗಳು ಮತ್ತು ಸಣ್ಣ ಮೂರ್ತಿಗಳೂ ಇವೆ. ಇವು ಭಗವಾನ್ ಬುದ್ಧರ ದೇಹ, ನುಡಿ ಮತ್ತು ಮನಸ್ಸಿನ ಸಂಕೇತಗಳಾಗಿವೆ. ಈ ಮೂರ್ತಿಗಳನ್ನು ದರ್ಶನ ಮಾಡುವುದರಿಂದ, ಪೂಜಿಸುವುದರಿಂದ ನಮ್ಮ ಮನಸ್ಸಿನಲ್ಲಿ ನಂಬಿಕೆ, ಶಾಂತಿ, ವಿವೇಕ, ಪ್ರೀತಿ, ದಯೆ ಮತ್ತು ಅನುಕಂಪಗಳು ಉತ್ಪತ್ತಿಯಾಗಿ ನಮ್ಮ ಭಾವನೆಗಳನ್ನು ಮತ್ತು

---

೧. ಸ್ವರ್ಣದೇವಸ್ಥಾನ (Golden Temples) ಕನ್ನಡಕ್ಕೆ ಅನುವಾದ – ಡಿ.ಎನ್.ಪುರುಷೋತ್ತಮರಾವ್, ಪುಟ. ೭೦.

ಅಹಿತಕರ ಯೋಚನೆಗಳನ್ನು ಶುದ್ಧೀಕರಣ ಮಾಡುತ್ತವೆ ಎಂಬ ನಂಬಿಕೆ ಪ್ರಬಲವಾಗಿದೆ.[೧]

**೫. ಗೋಡೆಯ ಚಿತ್ರಗಳು:** ಈ ಮೂರು ಬೃಹತ್ ಮೂರ್ತಿಗಳ ಎರಡು ಕಡೆ ಇರುವ ಚಿತ್ರಗಳು ಜೊಗ್‌ಚೆನ್ (DZOGCHEN)ರವರ ಬೋಧನೆಗಳನ್ನು ಆಚರಿಸಿ ಮಹಾಸಿದ್ಧಿಪಡೆದ ಗುರು ಪದ್ಮಸಂಭವರವರ ೨೫ ಶಿಷ್ಯಂದಿರದು. ಮೂರನೆಯ ಅಂತಸ್ತಿನ ಎರಡು ಕಡೆ ಇರುವ ಜೊಗ್‌ಚೆನ್ ಅವರ ೧೨ ಮಹಾಮಹಿಮ ಗುರುಗಳನ್ನು ಮತ್ತು ಭಗವಾನ್ ಬುದ್ಧರ ೧೨ ಮಹತ್ಕಾರ್ಯಗಳನ್ನು ಪ್ರತಿನಿದಿಸುತ್ತದೆ.

ಎರಡನೆಯ ಅಂತಸ್ತಿನ ಚಿತ್ರಗಳು ಪಲ್ಯಲು ಸಂಪ್ರದಾಯದ ಸಿಂಹಾಸನಾ-ಧೀಶರನ್ನು ಮತ್ತು ಜ್ಞಂಗ್‌ಮ ಸಂಪ್ರದಾಯದ ಮಹಾಮಹಿಮ ವಿದ್ವಾಂಸರನ್ನು ಮತ್ತು ಶ್ರೇಷ್ಠ ಬೋಧಕರನ್ನು ಪ್ರತಿನಿಧಿಸುತ್ತದೆ.

ಮೊದಲನೆಯ ಅಂತಸ್ತಿನ ಗೋಡೆಯ ಚಿತ್ರಗಳು ಮುಖಗಳು ಗುರುದೇವ ಮತ್ತು ಡಾಕಿನಿ ಮೂರು ದೇವತೆಗಳು ಹೊಂದಿವೆ. ಈ ಚಿತ್ರಗಳಲ್ಲಿ ತಾವು ತಾಂತ್ರಿಕ ಬೌದ್ಧಧರ್ಮದ ಪ್ರಭಾವವನ್ನು ಕಾಣಬಹುದಾಗಿದೆ.

ಇಲ್ಲಿ ದೇವತೆಗಳು ಕೋಪದ ರೂಪದಲ್ಲಿಯೂ ಹಾಗೂ ಗಂಡು ಹೆಣ್ಣು ದೇವತೆಗಳ ಸಂಗಮ ರೂಪದಲ್ಲಿಯೂ ಇರುವುದನ್ನು ನೋಡಿ ಆಶ್ಚರ್ಯವಾಗಬಹುದು. ತಾಂತ್ರಿಕ ಬೌದ್ಧಧರ್ಮದ ಪ್ರಕಾರ ಶಾಂತದೇವತೆಗಳು ರೇಶ್ಮೆವಸ್ತ್ರಗಳನ್ನು ಮತ್ತು ಅಮೂಲ್ಯ ಲೋಹ ಮತ್ತು ಹರಳುಗಳನ್ನು ಧರಿಸಿದ್ದಾರೆ. ಹಾಗೂ ಕೋಪದ ದೇವತೆಗಳು ಚರ್ಮ ಮತ್ತು ಮೂಳೆಯ ಆಭರಣಗಳನ್ನು ಧರಿಸಿದ್ದಾರೆ. ಇವುಗಳ ಭಾವಾರ್ಥಗಳನ್ನು ತಿಳಿಯಲು ಬೌದ್ಧಧರ್ಮವನ್ನು ಸಮಗ್ರವಾಗಿ ಅಭ್ಯಾಸ ಮಾಡ-ಬೇಕಾಗುತ್ತದೆ. ಇಲ್ಲಿ ಬುದ್ಧರು ಭಯಂಕರವಾಗಿ ಅಯುಧಗಳನ್ನು ಹಿಡಿದಿರುವುದು ಮತ್ತು ಕೆಲವು ಗಂಡುದೇವತೆಗಳು ಹೆಣ್ಣು ದೇವತೆಗಳನ್ನು ಆಲಂಗಿಸಿರುವುದು ಅವರ ಸ್ವಂತ ಇಚ್ಛೆಯಿಂದಲ್ಲ ಅವರು ಇದನ್ನು ಇಲ್ಲಿ ಮಾಡುತ್ತಿರುವುದು. ವಿವಿಧ ಮಾನಸಿಕ ಸ್ಥರದ ವ್ಯಕ್ತಿಗಳನ್ನು ಪಳಗಿಸುವುದಕ್ಕಾಗಿ ಮಾತ್ರ. ಉದಾಹರಣೆಗಾಗಿ ಚಂದ್ರನ ಪ್ರತಿಫಲನದ ಚಿತ್ರದ ಗಾತ್ರ, ಆಕಾರ ಮತ್ತು ಬಣ್ಣಗಳು ಯಾವಾಗಲೂ ಅದು ಪ್ರತಿಫಲಿಸಿದ ನೀರು ಮತ್ತು ಪಾತ್ರೆಯನ್ನೇ ಅವಲಂಭಿಸಿರುತ್ತದೆ. ಹಾಗೆಯೇ ಇಲ್ಲಿಯು ಬುದ್ಧರ ಮುಖಭಾವವು ಪರರಿಗೆ ಹಾನಿ ಉಂಟುಮಾಡುವ ಕ್ರೂರಿಗಳು ಉಗ್ರವಾಗಿ ಕಂಡು ಆ ಕ್ರೂರಿಗಳನ್ನು ಈ ಮೂಲಕ ಪಳಗಿಸಿ ಅವರನ್ನು ಒಬ್ಬ ಒಳ್ಳೆಯ

---

೧. ಸ್ವರ್ಣದೇವಸ್ಥಾನ (Golden Temples) ಕನ್ನಡಕ್ಕೆ ಅನುವಾದ – ಡಿ.ಎನ್.ಪುರುಷೋತ್ತಮರಾವ್, ಪುಟ. ೭೧.

ವ್ಯಕ್ತಿಯನ್ನಾಗಿ ಮಾಡುವುದೇ ಆಗಿದೆ. ಉದಾಹರಣೆಗಾಗಿ ಶಾಲೆಯಲ್ಲಿ ಗುರುಗಳು ವಿದ್ಯೆ ಕಲಿಯದ ವಿದ್ಯಾರ್ಥಿಗಳ ಮೇಲೆ ಅನುಕಂಪವಿದ್ದರೂ ಆ ವಿದ್ಯಾರ್ಥಿಗಳನ್ನು ಉತ್ತಮ ವಿದ್ಯಾರ್ಥಿಗಳನ್ನಾಗಿ ಮಾಡಲೆಂದೇ ಕೆಲವು ಕೋಪದ ಮಾತುಗಳನ್ನು ಆಡುವಂತೆ, ಇಲ್ಲಿ ಬುದ್ಧರು ಕ್ರೂರಿಗಳನ್ನು ಉತ್ತಮ ಸ್ಥಿತಿಗೆ ತರಲೆಂದೇ ಉಗ್ರವಾಗಿ ಕಾಣಿಸಿಕೊಳ್ಳಲೆಂದೇ ಬುದ್ಧರು ಅವರ ಸಂಗಾತಿಗಳೊಡನೆ ಸಂಗಮವಾಗಿರುವಂತೆ ಚಿತ್ರಿಸಲಾಗಿದೆ. ಅನುಕಂಪ ಮತ್ತು ವಿವೇಕ ಸಂಗಮವಾಗದೆ ಜ್ಞಾನೋದಯವು ಸಾಧ್ಯವೇ ಇಲ್ಲ.[೧]

**೬. ಜಾಂಗ್‌ಡಾಂಗ್ ಪಾಲ್‌ರಿಪೆಮ ಒಡ್‌ಕಿಪೋಡ್ರಾಂಗ್** (ZANGDOG PALRIPEMA ODKI PHODRANG)**(ಭವ್ಯವಾದ ತಾಮ್ರ ವರ್ಣದ ಪರ್ವತದ ಮೇಲಿರುವ ಬೆಳಕಿನ ಕಿರಣದ ಪದ್ಮ ಸಂಭವ ಅರಮನೆ):**

ಪರಮ ಪೂಜ್ಯ ಪೆನೋರ್‌ರಿಪೋಚೆಯವರು ೨೦೦೨ರಲ್ಲಿ ಜಾಂಗ್‌ಡೊಂಗ್‌ಪಾಲ್‌ರಿ ದೇವಸ್ಥಾನದ ನಿರ್ಮಾಣ ಕೈಗೊಂಡು ಅದನ್ನು ೨೦೦೪ರಲ್ಲಿ ಪೂರ್ಣಗೊಳಿಸಿದರು. ಈ ದೇವಸ್ಥಾನದ ಅಸ್ಥಿಭಾರದ ಪುಣ್ಯಸ್ಥಳದಲ್ಲಿ ಏಳು ಪವಿತ್ರ ಭಗವಾನ್ ಸಕ್ಯಮುನಿಯವರ ಪ್ರತಿಮೆಗಳು ಹಾಗೂ ಶ್ರೀಗುರುಪದ್ಮಸಂಭವರವರ ಮತ್ತು ಹಲವು ಪವಿತ್ರ ಮೂರ್ತಿಗಳಿವೆ. ಈ ಅಸ್ಥಿಭಾರದ ಗೋಡೆಗಳ ಮೇಲೆ ಗುರುಪದ್ಮಸಂಭವ ಮತ್ತು ಡಾಕಿನಿಯಾಶಿಶೋಗ್ಯಲ್, ಚರಿತ್ರೆಯನ್ನು ಬಣ್ಣಿಸಿರುವ ವರ್ಣಚಿತ್ರಗಳಿವೆ. ಈ ಅಸ್ಥಿಭಾರದ ಮೇಲೆ ಜಾಂಗ್‌ಡೊಂಗ್‌ಪಾಲ್‌ರಿ ಪೋಡ್ರಾಂಗ್-ರವರ ನೂತನವಾಗಿ ನಿರ್ಮಾಣಗೊಂಡ ಭವನ ಇದು ಗುರುಪದ್ಮಸಂಭವರವರ ಪುಣ್ಯಕ್ಷೇತ್ರವಾಗಿದೆ. ಧರ್ಮಕಾಯ ಭವನದ ಮೇಲ್ಮಹಡಿಯಲ್ಲಿ ಭಗವಾನ್ ವೈರೋಕಾನರವರ ಪವಿತ್ರಮೂರ್ತಿ ಇದೆ. ಇದರ ಸುತ್ತಲೂ ಐದು ಜಯಶಾಲಿಗಳಾದ ಕುಟುಂಬಗಳಿವೆ. ಈ ದೇವಸ್ಥಾನದ ಕೇಂದ್ರ ಮಹಡಿಯಲ್ಲಿ ಸಾಂಭೋಗಕಾಯರವರ ಭವನವಿದೆ. ಅಲ್ಲಿ ಭಗವಾನ್ ಅವಲೋಕಟೇಶ್ವರ ಪವಿತ್ರ ಪ್ರತಿಮೆ ಇದೆ. ಇವರ ಸುತ್ತಲೂ ಎಂಟು ಕೀರ್ತಿವಂತ ಬೋಧಿಸತ್ವರು ಇದ್ದಾರೆ. ಕೆಳಭಾಗದ ಅಂತಸ್ತಿನಲ್ಲಿ ನಿರ್ಮಾಣಕಾಯ ಭವನ ಇದೆ. ಅಲ್ಲಿ ಗುರುಪದ್ಮಸಂಭವಮೂರ್ತಿ ಇದೆ. ಇವರ ಸುತ್ತಲೂ ಇವರ ಎಂಟು ಸುಸ್ಪಷ್ಟ ಪ್ರತಿಮೆಗಳಿವೆ. ಈ ಎಲ್ಲಾ ಪ್ರತಿಮೆಗಳನ್ನು ತಾಮ್ರ ಮತ್ತು ಚಿನ್ನದಿಂದ ಮಾಡಲಾಗಿದೆ. ಇದಲ್ಲದೆ ಮೇಲ್ಮಹಡಿಯ ಗೋಡೆಗಳ ಮೇಲೆ ಐದು ಕೀರ್ತಿವಂತ ಕುಟುಂಬಗಳ ಚಿತ್ರವಿದೆ. ಮಧ್ಯದ ಮಹಡಿಯ ಗೋಡೆಗಳ ಮೇಲೆ ಎಂಟು ಪ್ರಖ್ಯಾತ ಕೀರ್ತಿವಂತ ಪುತ್ರ ಮತ್ತು ಹನ್ನೆರಡು ಸಂಪೂರ್ಣ ಸಫಲತೆ ಪಡೆದ

---

೧. ಸ್ವರ್ಣದೇವಸ್ಥಾನ (Golden Temples) ಕನ್ನಡಕ್ಕೆ ಅನುವಾದ – ಡಿ.ಎನ್.ಪುರುಷೋತ್ತಮರಾವ್, ಪುಟ. ೭೧.

ಅತ್ಯುತ್ತಮ ಮಹಾನ್ ಗುರುಗಳ ಚಿತ್ರಗಳಿವೆ. ನಿರ್ಮಾಣಕಾಯ ಭವನದ ಗೋಡೆಗಳ ಮೇಲೆ ಎಂಬತ್ತು ಭಾರತ ದೇಶದ ಪ್ರಖ್ಯಾತ ಋಷಿಗಳ ಚಿತ್ರಗಳು ಮತ್ತು ಗುರುಪದ್ಮ ಸಂಭವರವರ ಇಪ್ಪತ್ತೈದು ಅಂತರಂಗ ಶಿಷ್ಯರ ಚಿತ್ರಗಳಿವೆ. ಈ ದೇವಸ್ಥಾನದ ಹೊರಾಂಗಣದ ಭವ್ಯತೆಗಾಗಿ ಈ ದೇವಸ್ಥಾನದ ಪೂರ್ವ, ದಕ್ಷಿಣ, ಪಶ್ಚಿಮ ಮತ್ತು ದಿಕ್ಕಿನ ಗೋಡೆಗಳಿಗೆ ವಿವಿಧ ಬಣ್ಣಗಳಿಂದ ಸಿಂಗರಿಸಲಾಗಿದೆ. ಈ ವರ್ಣಗಳು ಹರಳು, ನೀಲ, ವೈಢೂರ್ಯ, ಲಜೂಲಿ, ಕಮಲಮಾಣಿಕ್ಯ ಮತ್ತು ನೀಲಮಣಿಗಳನ್ನು ಸಂಕೇತಿಸುತ್ತವೆ. ತಾಂತ್ರಿಕ ಧರ್ಮಗ್ರಂಥದಲ್ಲಿ ವಿವರಿಸಿದಂತೆ ಈ ದೇವಸ್ಥಾನವು ಚಚ್ಚೌಕಾರದಲ್ಲಿದ್ದು ಪ್ರತಿಮಹಡಿಯಲ್ಲೂ ನಾಲ್ಕು ನಾಲ್ಕು ಬಾಗಿಲುಗಳನ್ನು ಹೊಂದಿದೆ.

**ಶೈಕ್ಷಣಿಕ ಕೊಡುಗೆಗಳು:**

**೧. ಪ್ರಾಥಮಿಕ ಶಾಲೆ:**

ಪರಮಪೂಜ್ಯ ಪೆನೋರ್‌ರಿನ್‌ಪೋಚೆಯವರು ೧೯೬೨ರಲ್ಲಿ ಪ್ರಾಥಮಿಕ ಶಾಲೆಯನ್ನು ಪ್ರಾರಂಭಿಸಿದರು. ಆರಂಭದಲ್ಲಿ ಕೇವಲ ಕೆಲವೇ ವಿದ್ಯಾರ್ಥಿಗಳಿದ್ದ ಈ ಶಾಲೆ ಈಗ ೨೦೦೫ರಲ್ಲಿ ೧೨೦೦ಕ್ಕೂ ಹೆಚ್ಚಾದ ವಿದ್ಯಾರ್ಥಿಗಳನ್ನು ಹೊಂದಿವೆ. ಈ ವಿದ್ಯಾರ್ಥಿಗಳು ಸರಾಸರಿ ೧೦ರಿಂದ ೨೦ ವರ್ಷದವರಾಗಿದ್ದಾರೆ. ಈ ಶಾಲೆ ಎಂಟನೇ ತರಗತಿಯವರೆಗಿದ್ದು, ಇಲ್ಲಿ ವಿದ್ಯಾರ್ಥಿಗಳು ಲೆನ್‌ತ್ಸ ಭಾಷೆ, ವಾರ್‌ತು ಭಾಷೆ ಟಿಬೆಟಿಯನ್ ಭಾಷೆ, ಟಿಬೆಟಿಯನ್ ವ್ಯಾಕರಣ ಮಂತ್ರ ಪಠಣ, ಆಂಗ್ಲಭಾಷೆ, ಟಿಬೆಟಿಯನ್ ಚರಿತ್ರೆ, ಟಿಬೆಟಿಯನ್ ಬೌದ್ಧಧರ್ಮದ ಚರಿತ್ರೆ ಮತ್ತು ಬೌದ್ಧಧರ್ಮದ ಬೋಧಿಸತ್ವದ ೩೭ ಆಚರಣೆಗಳನ್ನೊಳಗೊಂಡ ಪುಸ್ತಕವನ್ನು ವ್ಯಾಸಂಗ ಮಾಡುತ್ತಿದ್ದಾರೆ.[೧]

**೨. ಡ್ರಟ್‌ಸ್ಸಾಂಗ್ (ಧರ್ಮಾಚರಣೆ ಮತ್ತು ಶಾಸ್ತ್ರೋಕ್ತ ಕಾರ್ಯಮಾಡುವ ಸ್ಥಳ)**

೮ ವರ್ಷದ ಪ್ರಾಥಮಿಕ ಶಾಲೆಯ ಶಿಕ್ಷಣ ಪಡೆದುಕೊಂಡ ನಂತರ ಪ್ರತಿಯೊಬ್ಬ ವಿದ್ಯಾರ್ಥಿಯೂ ಮೂರು ವರ್ಷ ಡ್ರಟ್‌ಸ್ಸಾಂಗ್‌ನಲ್ಲಿ ಇರಲೇಬೇಕಾಗುತ್ತದೆ. ಪ್ರಾಥಮಿಕವಾಗಿ ಡ್ರಟ್‌ಸ್ಸಾಂಗ್‌ನಲ್ಲಿ ಬೌದ್ಧ ಸಂನ್ಯಾಸಿಗಳು ಶಾಸ್ತ್ರವಿಧಿ, ನಾಟ್ಯ ಮಂಡಲರಚನೆ ಮತ್ತು ಮಂತ್ರಪಠಣವನ್ನು ವ್ಯಾಸಂಗ ಮಾಡುತ್ತಾರೆ. ಅವರು ಸೂತ್ರ ಮತ್ತು ತಂತ್ರ ಮತ್ತು ಕೋಪವನ್ನು ಶಾಂತಗೊಳಿಸುವುದು, ಹೆಚ್ಚುವರಿಸುವುದು ಮತ್ತು ವಶಪಡಿಸಿಕೊಳ್ಳುವುದರ ಚಟುವಟಿಕೆಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿರುತ್ತಾರೆ.

---

೧. ಸ್ವರ್ಣದೇವಸ್ಥಾನ (Golden Temples) ಕನ್ನಡಕ್ಕೆ ಅನುವಾದ – ಡಿ.ಎನ್.ಪುರುಷೋತ್ತಮರಾವ್, ಪುಟ. ೭೬.

ಅವರು ೫,೦೦,೦೦೦ ಮೊತ್ತದ ಪೂರ್ವಭಾವಿ ಆಚರಣೆಗಳನ್ನು ಆಚರಣೆ ಮಾಡುತ್ತಾರೆ. ಹಾಗೆಯೇ ಇವರು ವೈಯಕ್ತಿಕ ದೇವರನ್ನು ಧ್ಯಾನಮಾಡುತ್ತಾ, ಮಂತ್ರಪಠಣ ಮಾಡುತ್ತಾರೆ. ಅರ್ಹತೆಗಳನ್ನು ಗಳಿಸಿ ಅವರ ಶ್ರದ್ಧಾ ಪ್ರಾರ್ಥನೆಯನ್ನು ಪವಿತ್ರಗೊಳಿಸಿಕೊಳ್ಳುತ್ತಿರುತ್ತಾರೆ. ಜನರು ಅವರ ಖಾಯಿಲೆಗಳನ್ನು ಶಮನಗೊಳಿಸಲು ಅಡೆತಡೆಗಳನ್ನು ದೂರಮಾಡಲು ಹಾನಿಕಾರಕ ಆತ್ಮಗಳನ್ನು ಸಾಂತ್ವನಗೊಳಿಸಲು, ದೀರ್ಘಾಯುಷ್ಯ ಹೊಂದಲು ಅರ್ಹತೆ, ಅಭಿವೃದ್ಧಿ ಮತ್ತು ಯಶಸ್ಸನ್ನು ವೃದ್ಧಗೊಳಿಸಲು, ಈ ಮೇಲೆ ಹೇಳಿದ ಪ್ರಭುತ್ವ ಪಡೆದ ಬೌದ್ಧ ಸಂನ್ಯಾಸಿಗಳನ್ನು ಸ್ವಾಗತಿಸುತ್ತಿರುತ್ತಾರೆ. ಈ ವಿದ್ಯಾರ್ಥಿಗಳು ಮುಂದಿನ ವಿದ್ಯಾಭ್ಯಾಸಕ್ಕಾಗಿ ನಾಮ್‌ಡ್ರೋಲಿಂಗ್ ಸಂಸ್ಥೆಗೆ ಸೇರುತ್ತಾರೆ.[೧]

**೩. ಜ್ಞಗ್‌ಗ್ಯೆರ್ ಜ್ಞಂಗ್ ಮ ಸಂಸ್ಥೆ ಮಹಾವಿದ್ಯಾಲಯ:**

ಪರಮಪೂಜ್ಯ ಪೆನೋರ್‌ರಿನ್‌ಪೋಚೆಯವರು ಈ ಸಂಸ್ಥೆಯನ್ನು ೧೯೭೮ರಲ್ಲಿ ಸ್ಥಾಪಿಸಿದರು. ಇಲ್ಲಿ ವಿದ್ಯಾರ್ಥಿಗಳು ೯ ವರ್ಷ ಭಗವಾನ್ ಬುದ್ಧರ ಧರ್ಮ ಮತ್ತು ತಂತ್ರಬೋಧನೆಗಳನ್ನು ಮತ್ತು ಇವುಗಳ ಭಾರತೀಯರ ಹಾಗೂ ಟಿಬೆಟಿಯನ್ನರ ವಿದ್ವಾಂಸರ ಮತ್ತು ಗುರುಗಳ ವ್ಯಾಖ್ಯಾನಗಳನ್ನು ವ್ಯಾಸಂಗ ಮಾಡುತ್ತಾರೆ. ಅಲ್ಲದೆ ಕಾವ್ಯ, ಪ್ರಬಂಧ, ವ್ಯಾಕರಣ, ಟಿಬೆಟ್ಟಿನ ಚರಿತ್ರೆ, ಟಿಬೆಟ್ಟಿನ ಬೌದ್ಧಧರ್ಮದ ಚರಿತ್ರೆ ಮತ್ತು ಆಂಗ್ಲ ಭಾಷೆಯನ್ನು ವ್ಯಾಸಂಗ ಮಾಡುತ್ತಾರೆ.

ಇಲ್ಲಿ ಇಲ್ಲಿಯವರೆಗೆ ಅನೇಕ ದೇಶಗಳಿಂದ ಸುಮಾರು ೧೫೨೫ ವಿದ್ಯಾರ್ಥಿಗಳು ತಮ್ಮ ಹೆಸರನ್ನು ದಾಖಲು ಮಾಡಿಸಿದ್ದಾರೆ. ಇದರಲ್ಲಿ ೨೭೩ ಆಚಾರ್ಯ ವಿದ್ಯಾರ್ಥಿಗಳು ತಮ್ಮ ೯ ವರ್ಷ ಕಾರ್ಯಕ್ರಮದ ವಿದ್ಯಾಭ್ಯಾಸ ಮುಗಿಸಿ ಆಚಾರ್ಯ ಪದವಿ (ಎಂ.ಎ.ಗೆ ಸಮನಾದ ಪದವಿ)ಯನ್ನು ೫೭ ಜನ ವಿಶ್ವವಿದ್ಯಾನಿಲಯದ ಅತ್ಯುಚ್ಚ ಪದವಿಯಾದ (ಪಿಹೆಚ್.ಡಿ.ಗೆ ಸಮನಾದ ಪದವಿ) ಕೆನ್‌ಪೊ ಪದವಿಯನ್ನು ಪಡೆದಿದ್ದಾರೆ. ಒಟ್ಟಾರೆ ಇಲ್ಲಿ ವಿದ್ಯಾರ್ಥಿಗಳು ಒಟ್ಟು ನಾಲ್ಕು ವಿವಿಧ ಪದವಿಯನ್ನು ಪಡೆಯುತ್ತಿದ್ದಾರೆ.[೨]

**೪. ಸಾಂಮ್‌ಟೆನ್ ಒಸೆಲ್‌ಲಿಂಗ್ ರಿಟ್ರೀಟ್ – ಧ್ಯಾನ ಕೇಂದ್ರ:**

ಪರಮಪೂಜ್ಯ ಪೆನೋರ್‌ರಿನ್‌ಪೋಚೆಯವರು ೧೯೮೫ರಲ್ಲಿ ಈ ಧ್ಯಾನ ಕೇಂದ್ರವನ್ನು ಸ್ಥಾಪಿಸಿದರು. ಇಲ್ಲಿ ಧ್ಯಾನಸಕ್ತರು ಜನನ ಹಾಗೂ ದೈವಾಧೀನ ಸ್ಥರಗಳ

---

೧. ಸ್ವರ್ಣದೇವಸ್ಥಾನ (Golden Temples) ಕನ್ನಡಕ್ಕೆ ಅನುವಾದ – ಡಿ.ಎನ್.ಪುರುಷೋತ್ತಮರಾವ್, ಪುಟ. ೭೭.

೨. ಅದೇ, ಪುಟ. ೭೮.

ವಿಸ್ತರ ವಿಷಯಗಳನ್ನೊಳಗೊಂಡ ಜ್ಞಿಂಗ್‌ಮ ಬೋಧನೆಗಳನ್ನು ಕುರಿತು ತಾವು ಕಲಿತ ಜ್ಞಾನದ ಬಗ್ಗೆ ಆಳವಾದ ಧ್ಯಾನ ಮಾಡುವರು. ಅಲ್ಲದೆ ಇವರು ಸ್ಪಷ್ಟ ಜ್ಞಾನೋದಯ ತರುವ ಭಗವಾನ್ ಬುದ್ಧರ ಅತ್ಯಂತ ಶ್ರೇಷ್ಠ ತಂತ್ರಜ್ಞಾನವಾದ ಜೊಗ್‌ಚಿನ್ ಬೋಧನೆಗಳನ್ನು ಆಚರಣೆಗೆ ತರುವರು. ಇಲ್ಲಿ ಧ್ಯಾನ ಮಾಡುವವರು ಮೂರು ವರ್ಷ ತಂಗಬೇಕು. ಈ ಅವಧಿಯಲ್ಲಿ ಅವರು ಮಂತ್ರಪಠಣ ಮತ್ತು ಧರ್ಮದ ಮೂಲದ ವಿಚಾರಗಳನ್ನು ನೆರವೇರಿಸಿ ಸಾಧನೆಯ ಲಕ್ಷಣಗಳನ್ನು ಪರಿಪೂರ್ಣಗೊಳಿಸಬೇಕು. ಇಲ್ಲಿಯವರೆಗೆ ೧೨೫ಕ್ಕಿಂತಲೂ ಹೆಚ್ಚು ಬೌದ್ಧಭಿಕ್ಷುಗಳು ಈ ಧರ್ಮ ವಿಭಾಗದ ಅಧ್ಯಯನ ಮುಗಿಸಿ ಅವರ ಧರ್ಮಾಚರಣೆಯನ್ನು ಇಂದಿಗೂ ಮುಂದುವರಿಸುತ್ತಿದ್ದಾರೆ.[೧]

**೫. ತ್ಸೋಗ್ಯಲ್ ಶೆಡ್ರುಬ್ ಧಾರ್ಗೆಲಿಂಗ್ ಸಂನ್ಯಾಸಿನಿಯರ ಬೌದ್ಧವಿಹಾರ:**

ನಾಮ್‌ಡ್ರೋಲಿಂಗ್ ಬೌದ್ಧವಿಹಾರದಿಂದ ಈ ವಿಹಾರ ಒಂದು ಕಿಲೋಮೀಟರ್ ದೂರದಲ್ಲಿದೆ. ಇಲ್ಲಿ ಸ್ತ್ರೀಯರಿಗೂ ಧರ್ಮದ ಅಧ್ಯಯನ ಹಾಗೂ ಆಚರಣೆಯ ಬಗ್ಗೆ ಅನುಕೂಲ ಮಾಡಿಕೊಡಲು ಪರಮಪೂಜ್ಯ ಪೆನೋರ್‌ರಿನ್‌ಪೋಚೆಯವರು ೧೯೯೩ರಲ್ಲಿ ಈ ಸಂನ್ಯಾಸಿನಿಯರ ಬೌದ್ಧವಿಹಾರವನ್ನು ಸ್ಥಾಪನೆ ಮಾಡಿದರು. ಇಲ್ಲಿ ೭೯೦ಕ್ಕೂ ಹೆಚ್ಚು ಸಂನ್ಯಾಸಿನಿಯರು ತಮ್ಮ ಹೆಸರನ್ನು ದಾಖಲು ಮಾಡಿಸಿ ಈಗ ಇಲ್ಲಿ ೫೩೦ಕ್ಕೂ ನಿವಾಸಿ ಸಂನ್ಯಾಸಿನಿಯರು ಇದ್ದಾರೆ. ಹಿರಿಯ ಸಂನ್ಯಾಸಿನಿಯರು ಮಂತ್ರಪಠಣ ಮಾಡುವುದರಲ್ಲಿ ಮತ್ತು ಧರ್ಮದ ಮೂಲವನ್ನು ಸಾಧನೆ ಮಾಡುವುದರಲ್ಲಿ, ಅಲ್ಲದೆ ತ್ಸಲುಂಗ್ ಮತ್ತು ಭಗವಾನ್ ಬುದ್ಧರ ಅತ್ಯಂತ ಶ್ರೇಷ್ಠ ತಂತ್ರಜ್ಞಾನವಾದ ಜೊಗ್‌ಚೆನ್ ಬೋಧನೆಗಳನ್ನು ಆಚರಣೆ ಮಾಡುವುದರಲ್ಲಿ ನಿರತರಾಗಿದ್ದಾರೆ. ಯುವ ಸಂನ್ಯಾಸಿಯರು ಬೌದ್ಧವಿಹಾರದ ಪ್ರಾಥಮಿಕ ಶಾಲೆಯಲ್ಲಿ ಪ್ರಾಥಮಿಕ ಟಿಬೆಟಿಯನ್ ವ್ಯಾಕರಣ, ಪ್ರಾಥಮಿಕ ಬೌದ್ಧ ಬೋಧನೆಗಳನ್ನು ಕಲಿತು ನಂತರ ಬೌದ್ಧ ಸಂನ್ಯಾಸಿನಿಯರ ಮಹಾವಿದ್ಯಾಲಯಕ್ಕೆ ಬರುತ್ತಾರೆ.[೨]

**೬. ತ್ಸೊಗ್ಯಲ್ ಶೆಡ್ರುಬ್ ಥೋಸಂ ಗವಾಯ್‌ತ್ಸಲಾ ಸಂನ್ಯಾಸಿಯರ ಮಹಾವಿದ್ಯಾನಿಲಯ ಸಂಸ್ಥೆ:**

ಪರಮಪೂಜ್ಯರು ಈ ಸಂನ್ಯಾಸಿನಿಯರ ಮಹಾವಿದ್ಯಾಲಯ ಸಂಸ್ಥೆಯನ್ನು ೧೯೯೫ರಲ್ಲಿ ಸ್ಥಾಪಿಸಿದರು. ಇಲ್ಲಿ ಸಂನ್ಯಾಸಿನಿಯರು ೯ ವರ್ಷದ ನಮ್ಮ

---

೧. ಸ್ವರ್ಣದೇವಸ್ಥಾನ (Golden Temples) ಕನ್ನಡಕ್ಕೆ ಅನುವಾದ – ಡಿ.ಎನ್.ಪುರುಷೋತ್ತಮರಾವ್, ಪುಟ. ೭೮.

೨. ಅದೇ, ಪುಟ. ೭೯.

ಕಾರ್ಯಕ್ರಮದಲ್ಲಿ ಸೂತ್ರ, ತಂತ್ರ, ಕಾವ್ಯ, ವ್ಯಾಕರಣ, ಪ್ರಬಂಧ ಮತ್ತು ಹಲವು ರಂಗಗಳಲ್ಲಿ ಅಧ್ಯಯನ ಮಾಡುತ್ತಾರೆ. ೨೦೦೨ರಿಂದ ಭಾರತದ ಇತರ ಸಂನ್ಯಾಸಿನಿ ಬೌದ್ಧವಿಹಾರಗಳಿಗೆ ಇಲ್ಲಿಂದ ಸಂನ್ಯಾಸಿನಿ ಅಧ್ಯಾಪಕಿಯರನ್ನು ಕಳುಹಿಸಲಾಗುತ್ತಿದೆ. ಇಲ್ಲಿನ ವಿದ್ಯಾಭ್ಯಾಸದ ಕ್ರಮ ಜ್ಞಗ್‌ಗ್ಯೆರ್ ಜ್ಞಿಂಗ್‌ಮ ಮಹಾವಿದ್ಯಾಲಯವನ್ನೇ ಹೋಲುತ್ತದೆ.

**೭. ವಸತಿ ಗೃಹಗಳ ಎಂಟು ವಿಭಾಗಗಳು:**

ಈ ಬೌದ್ಧವಿಹಾರದ ೮ ಭೂಭಾಗಗಳಲ್ಲಿ ಒಂದಾದ ವಿಮೋಚನಾ ಭೂಭಾಗ ಅಂದರೆ ನಾಮಡ್ರೋಲಿಂಗ್ ಈ ಬೌದ್ಧವಿಹಾರದ ವಾಡಿಕೆಯ ಹೆಸರಾಗಿದೆ.[೧]

೧) ಶೆರಬ್‌ರೀಲ್‌ಡಿಲಿಂಗ್ ಪ್ರಾಥಮಿಕ ಶಾಲೆ (ಜ್ಞಾನಭೂಮಿ)ಯೂ ಈ ವಿಭಾಗದ ಒಂದು ಭಾಗವಾಗಿದೆ. ಈ ವಿಭಾಗದಲ್ಲಿ ೮೩ ಕೊಠಡಿಗಳಿವೆ. ಪ್ರತಿಯೊಂದು ಕೊಠಡಿಯಲ್ಲಿ ೧೫ ಕಿರಿಯ ಸನ್ಯಾಸಿಗಳು ಒಟ್ಟಿಗೆ ವಾಸಿಸುತ್ತಿದ್ದಾರೆ ಮತ್ತು ಅಧ್ಯಾಪಕರು ಮತ್ತು ಅಧಿಕಾರಿಗಳಿಗೆ ಪ್ರತ್ಯೇಕ ಕೋಣೆಗಳಿವೆ. ಅಲ್ಲದೇ ಇಲ್ಲಿ ೧೫ ಶಾಲಾ ತರಗತಿಯ ಕೊಠಡಿಗಳಿವೆ.

೨) ಡ್ರಾಟ್‌ತ್ಸಂಗ್‌ನಲ್ಲಿ ೫೫೨ ಕೊಠಡಿಗಳಿವೆ. ಇಲ್ಲಿ ಒಂದು ಕೊಠಡಿಯಲ್ಲಿ ಪ್ರಾಥಮಿಕ ಶಿಕ್ಷಣ ಮುಗಿಸಿದ ಇಬ್ಬಿಬ್ಬರಿಗಾಗಿ ಒಂದೊಂದು ಕೊಠಡಿಗಳಿವೆ. ಮೂರು ವರ್ಷದ ಧ್ಯಾನ ಮುಗಿಸಿದ ಹಿರಿಯ ಸನ್ಯಾಸಿಗಳಿಗೆ ಮತ್ತು ಬೌದ್ಧವಿಹಾರದ ಸಿಬ್ಬಂದಿಗೆ ಪ್ರತ್ಯೇಕ ಕೋಣೆಗಳಿವೆ.

೩) ಸಾಮ್‌ಟೆನ್‌ಲಿಂಗ್ ಚಿತ್ತಾಕಾಗ್ರತೆಯ ಭೂಮಿ – ಇಲ್ಲಿ ಏಳು ಮಹಡಿಗಳಿವೆ. ಇದು ಡ್ರಾಟ್‌ತ್ಸಾಂಗ್ ವಿಭಾಗದಲ್ಲಿದೆ. ಇಲ್ಲಿ ೬೩ ಕೋಣೆಗಳಿವೆ. ಇಲ್ಲಿ ಒಂದು ಕೋಣೆಯಲ್ಲಿ ೪ ಕಿರಿಯ ಸನ್ಯಾಸಿಗಳಿದ್ದಾರೆ ಹಾಗೂ ಒಂದು ಕೋಣೆಯಲ್ಲಿ ೨ ಹಿರಿಯ ಸನ್ಯಾಸಿಗಳಿದ್ದಾರೆ.

೪) ಜ್ಞಗ್ಗುರ್‌ಧೋಲೋಪ್‌ಡೂಜ್ಞಾಗ್‌ರಿಗ್‌ಪಜ್ಯಜ್ಞೆಲಿಂಗ್ (ಅರಿವು, ಸೂತ್ರ ಮತ್ತು ತಂತ್ರಗಳನ್ನು ಸಂಸ್ಕರಣಗೊಳಿಸುವ ಭೂಮಿ)ನಲ್ಲಿ ೪೫೦ ಕೊಠಡಿಗಳಿವೆ. ಪ್ರತಿಯೊಂದು ಕೊಠಡಿಯಲ್ಲೂ ಎರಡೆರಡು ವಿದ್ಯಾರ್ಥಿಗಳು ಇದ್ದಾರೆ. ಅಧ್ಯಾಪಕರು ಮತ್ತು ಸಿಬ್ಬಂದಿ ಕೆಲಸಗಾರರು ಪಕ್ಕಪಕ್ಕದ ಪ್ರತ್ಯೇಕ ಕೋಣೆಯಲ್ಲಿ ವಾಸಿಸುತ್ತಿದ್ದಾರೆ.

---

೧. ಸ್ವರ್ಣದೇವಸ್ಥಾನ (Golden Temples) ಕನ್ನಡಕ್ಕೆ ಅನುವಾದ – ಡಿ.ಎಸ್.ಪುರುಷೋತ್ತಮರಾವ್, ಪುಟ. ೭೯.

೫) ಸ್ಯಾಂಮ್‌ಟೆನ್‌ಓಸೆಲ್‌ಲಿಂಗ್‌ರಿಟ್ರೀಮ್ ಧ್ಯಾನ ಕೇಂದ್ರದಲ್ಲಿ (ಚಿತ್ತೈರಾಗ್ರತೆಯ) ಜ್ಞಾನೋದಯ ಭೂಮಿ) ೫೦ ಕೊಠಡಿಗಳಿವೆ. ಇಲ್ಲಿ ಒಂದೊಂದು ಕೋಣೆಯಲ್ಲಿ ಧ್ಯಾನಾರೂಢರು ವಾಸಿಸುತ್ತಾರೆ.

೬) ಶೆಡ್ರುಪ್‌ಡಾಗ್ಯೆಲಿಂಗ್ ಸಂನ್ಯಾಸಿ ಮಠದಲ್ಲಿ (ಬೋಧನೆ ಮತ್ತು ಅಭ್ಯಾಸವನ್ನು ವೃದ್ಧಿಗೊಳಿಸುವ ಭೂಮಿ) ೨೩೦ ಕೊಠಡಿಗಳಿವೆ. ಇಲ್ಲಿ ಸ್ಥಳಾಭಾವ ಇರುವುದರಿಂದ ಕೋಣೆಯಲ್ಲಿ ವಾಸಿಸುವವರ ಸಂಖ್ಯೆ ಬೇರೆ ಬೇರೆಯಾಗಿರುತ್ತದೆ. ನೂತನ ಸಂನ್ಯಾಸಿನಿಯರ ವಸತಿಗೃಹ ಇನ್ನೂ ನಿರ್ಮಾಣ ಹಂತದಲ್ಲಿದೆ.

೭) ತ್ಸೋಗ್ಯಲ್ ಶೆಡ್ರುಬ್‌ಥೋಸಮ್‌ಗವಾಯ್‌ತ್ಸಲ್ ಸನ್ಯಾಸಿನಿಯರ ಸಂಸ್ಥೆ (ಅಧ್ಯಯನ ಮತ್ತು ಪರ್ಯಾಲೋಚನೆ ಭೂಮಿ) ೩೦ ಕೋಣೆಗಳಿಂದ ಒಳಗೊಂಡಿದೆ. ಇಲ್ಲಿಯೂ ಪ್ರತಿ ಕೋಣೆಯಲ್ಲಿ ವಾಸಿಸುವ ಸಂನ್ಯಾಸಿನಿಯರ ಸಂಖ್ಯೆ ಬೇರೆ ಬೇರೆಯಾಗಿರುತ್ತದೆ.

೮) ಪೆಲ್‌ಜೋರ್‌ಧಾರ್‌ಗೆಲಿಂಗ್ (ಸಂಪತ್ತನ್ನು ವೃದ್ಧಿಗೊಳಿಸುವ ಭೂಮಿ) ಇದನ್ನು ಮುಂದಿನ ಜನಾಂಗದ ಅಭಿವೃದ್ಧಿಗಾಗಿ ನಿರ್ಮಾಣ ಮಾಡಲಾಗಿದೆ. ಇಲ್ಲಿ ವಸತಿಗೃಹ, ಅಂಗಡಿಗಳು ಮತ್ತು ಉಪಹಾರಮಂದಿರ ಇದೆ. ಈ ಪೆಲ್‌ಜೋರ್‌ಧಾರ್‌ಗೆಲಿಂಗ್‌ನ ಆದಾಯವನ್ನು ಈ ಬೌದ್ಧಮಂದಿರದ ಅಭಿವೃದ್ಧಿಗೆ ಉಪಯೋಗಿಸಲಾಗುತ್ತಿದೆ.[೧]

**೮. ಗ್ರಂಥಾಲಯ:**

ಸ್ವರ್ಣಮಂದಿರದ ಎರಡನೆಯ ಮಹಡಿಯಲ್ಲಿ ಸಕಲರಿಗಾಗಿ ಒಂದು ಗ್ರಂಥಾಲಯವಿದೆ. ಧ್ಯಾನಕೇಂದ್ರ, ಸಂನ್ಯಾಸಿನಿಯರ ಮಠ ಮತ್ತು ಈ ಸಂಸ್ಥೆಯವರಿಗಾಗಿ ಪ್ರತ್ಯೇಕ ಗ್ರಂಥಾಲಯಗಳಿವೆ.[೨] ಒಟ್ಟಿನಲ್ಲಿ ಇಲ್ಲಿ ೪ ಗ್ರಂಥಾಲಯಗಳಿವೆ. ವಿದ್ಯಾರ್ಥಿಗಳ ಅಧ್ಯಯನ ಮತ್ತು ಕಲಿಯುವಿಕೆಯ ಅಭಿವೃದ್ಧಿಗಾಗಿ ಭಗವಾನ್ ಬುದ್ಧನ ಸೂತ್ರಗಳು ಮತ್ತು ಭಾರತ ಮತ್ತು ಟಿಬೆಟಿನ ವಿದ್ವಾಂಸರ ಪ್ರಬಂಧಗಳು, ಕಥೆಗಳು, ನಿಘಂಟುಗಳು, ಪುರವಣಿಗೆಗಳು ಮತ್ತು ವಿವಿಧ ಆಂಗ್ಲ ಮತ್ತು ಹಿಂದಿ ಭಾಷೆಯ ಪುಸ್ತಕಗಳನ್ನು ಒದಗಿಸಲಾಗುತ್ತಿದೆ. ಇದಲ್ಲದೇ ಸಿದ್ಧಪಡಿಸಿಕೊಂಡ ಜ್ಞಾನಿಗಳ ಬೋಧನೆಗಳನ್ನೊಳಗೊಂಡ ವಿವಿಧ ಸಿ.ಡಿ. ಮತ್ತು ಧ್ವನಿಸುರುಳಿಗಳನ್ನು

---

೧. ಸ್ವರ್ಣದೇವಸ್ಥಾನ (Golden Temples) ಕನ್ನಡಕ್ಕೆ ಅನುವಾದ – ಡಿ.ಎನ್.ಪುರುಷೋತ್ತಮರಾವ್, ಪುಟ. ೮೦.

೨. ಅದೇ, ಪುಟ. ೮೧.

ಒದಗಿಸಲಾಗಿದೆ. ಇದಲ್ಲದೆ ಅಪರೂಪದ ಪಠ್ಯಪುಸ್ತಕಗಳನ್ನು ಸಂಗ್ರಹಿಸಿ ಅವುಗಳನ್ನು ಅನುಕ್ರಮವಾಗಿ ಅಣಿಮಾಡುತ್ತಿದ್ದೇವೆ. ಸ್ವರ್ಣಮಂದಿರದಲ್ಲಿನ ಗ್ರಂಥಾಲಯದ ಸಂಪನ್ಮೂಲಗಳನ್ನು ಧಾರಾಳವಾಗಿ ಉಪಯೋಗಿಸಬಹುದಾಗಿದೆ. ಈ ಸಂಸ್ಥೆಯ ಗ್ರಂಥಾಲಯದ ಸಂಪನ್ಮೂಲಗಳನ್ನು ಸಂನ್ಯಾಸಿ ಮತ್ತು ಸಂನ್ಯಾಸಿನಿಯರ ಉಪಯೋಗಕ್ಕೆ ಮಾತ್ರ ಸೀಮಿತವಾಗಿದೆ.

೯. ಸಂಪಾದಕೀಯ ಸಮಿತಿ:

೧೯೯೧ರಲ್ಲಿ ಆರಂಭವಾದ ಈ ಸಂಪಾದಕೀಯ ಸಮಿತಿಯು, ಜೀವನ ಚರಿತ್ರೆಗಳು, ಕಥೆಗಳು, ನಿವೇದನ ಪತ್ರಿಕೆಗಳು, ಮುನ್ನುಡಿಗಳು,ಇತಿಹಾಸದ ವೃತ್ತಾಂತಗಳು, ಪದ್ಯಗಳು ಮತ್ತು ಹಲವು ಒಟ್ಟು ೩೪ ಪುಸ್ತಕಗಳನ್ನು ಗ್ರಂಥಗಳಿಂದ ಸಂಗ್ರಹಿಸಿ ಪ್ರಕಟಿಸಲಾಗಿದೆ. ೨೫ ಅಕ್ಟೋಬರ್ ೨೦೦೨ರಿಂದ ಪೇಮರಾನ್‌ಡಾಂಗ್ ಎಂಬ ಸಾಹಿತ್ಯದ ನಿಯತಕಾಲಿಕೆ ಪತ್ರಿಕೆಯನ್ನು ಪ್ರಕಟಿಸುತ್ತಿದ್ದೇವೆ. ಇದರಲ್ಲಿ ಜೀವನ ಚರಿತ್ರೆಗಳು, ಪುರಾಣ ಕಥೆಗಳು, ಖ್ಯಾತಿವೆತ್ತ ವರಿಷ್ಠ ಶಿಕ್ಷಕರ ಬುದ್ಧಿವಾದಗಳು ಮತ್ತು ಹಲವು ವಿಚಾರಗಳು ಪ್ರಕಟವಾಗುತ್ತಿವೆ. ಈ ವಿಭಾಗಗಳನ್ನು ಪ್ರತ್ಯೇಕಗೊಳಿಸಿ ಬೇರೆ ಬೇರೆ ಆವೃತ್ತಿಗಳಲ್ಲಿ ವರ್ಷಕ್ಕೆ ಎರಡು ಭಾರಿ ಪ್ರಕಟಿಸಲಾಗುತ್ತಿದೆ.[೧]

ಈ ಸಂಪಾದಕೀಯ ಸಮಿತಿಯ ಸಾಹಿತ್ಯಕ ಪುರವಣೆ ಪೆಮೆರಾಂಗ್‌ಡಾಂಗ್ ಸದಸ್ಯರನ್ನು ಒಳಗೊಂಡಿದೆ. ಈ ಸಾಹಿತ್ಯಕ ಪುರವಣಿ ನಾಮ್‌ಡ್ರೋಲಿಂಗ್ ಹಾಗೂ ಇತರ ಬೌದ್ಧವಿಹಾರದ ವಿದ್ಯಾರ್ಥಿ ಲೇಖನಗಳನ್ನು ಪ್ರಕಟಿಸುತ್ತದೆ.

**೧೦. ಗಣಕಯಂತ್ರ ವಿಭಾಗ:**

ಈ ಗಣಕಯಂತ್ರ ವಿಭಾಗವನ್ನು ಅತ್ಯಾಧುನಿಕ ಗಣಕಯಂತ್ರಗಳು ಮತ್ತು ಆಧುನಿಕ ಮುದ್ರಣ ತಾಂತ್ರಿಕತೆಯಿಂದ ಸಜ್ಜುಗೊಳಿಸಿ ಗ್ರಂಥಗಳ ಪ್ರಕಟಣೆಗಾಗಿ ಉಪಯೋಗಿಸಿಕೊಳ್ಳಲಾಗುತ್ತಿದೆ. ಇಲ್ಲಿ ಅತ್ಯಮೂಲ್ಯ ಸೂತ್ರಗಳು, ಪ್ರಬಂಧಗಳು ಮತ್ತು ಮುಖ್ಯವಾದ ಧಾರ್ಮಿಕ ಪಠ್ಯಪುಸ್ತಕಗಳನ್ನು ಸಂರಕ್ಷಿಸಲಾಗಿದೆ. ಈ ಸಂಸ್ಥೆಯ ೯ನೇ ತರಗತಿಯವರೆಗೆ ಸಕಲ ವಿಷಯಗಳನ್ನು ಮತ್ತು ಕೆಲವು ಹೆಚ್ಚಿನ ಅಪರೂಪದ ಪಠ್ಯಪುಸ್ತಕಗಳನ್ನು ಸಂಪೂರ್ಣವಾಗಿ ತಿದ್ದುಪಡಿಮಾಡಿ ದಾಖಲಿಸಲಾಗಿದೆ. ವಿದ್ಯಾರ್ಥಿಗಳ ಸಂಪೂರ್ಣ ಉಪಯೋಗಕ್ಕಾಗಿ ಬಹುಮಟ್ಟಿನ ಪಠ್ಯಪುಸ್ತಕದ ಪಠ್ಯಕ್ರಮಗಳನ್ನು ಟಿಬೆಟ್ಟಿನ ಸಂಪ್ರದಾಯಕ್ಕೆ ಅನುಗುಣವಾಗಿ ಮುದ್ರಿಸಲಾಗಿದೆ. ಈ

---

೧. ಸ್ವರ್ಣದೇವಸ್ಥಾನ (Golden Temples) ಕನ್ನಡಕ್ಕೆ ಅನುವಾದ – ಡಿ.ಎನ್.ಪುರುಷೋತ್ತಮರಾವ್, ಪುಟ. ೮೨.

ಗಣಕಯಂತ್ರ ವಿಭಾಗವು ಮಧ್ಯಮ ಗಾತ್ರದ ಪಂಚಾಂಗ ಪುಸ್ತಕಗಳನ್ನು, ಖ್ಯಾತಿವೆತ್ತ ವಿದ್ವಾಂಸರ, ಬುದ್ಧಿವಾದಿಗಳ ಪುಸ್ತಕಗಳನ್ನೂ, ಪವಿತ್ರಜ್ಞಾನ ಪುಸ್ತಕಗಳನ್ನೂ ಮತ್ತು ಇತರೆ ಉಪಯುಕ್ತ ಪುಸ್ತಕಗಳನ್ನು ಪ್ರಕಟಿಸುತ್ತಿದೆ.

**೧೧. ವೃದ್ಧಾಶ್ರಮ:**

ಬಹು ದಯಾಭಾವದಿಂದ ಪರಮ ಪೂಜ್ಯ ಪೆನೋರ್‌ರಿನ್‌ಪೋಚೆಯವರು ಬಡ ವಯೋವೃದ್ಧರಿಗಾಗಿ ವೃದ್ಧಾಶ್ರಮವನ್ನು ಸ್ಥಾಪಿಸಿದ್ದಾರೆ. ಇಲ್ಲಿ ಎಲ್ಲಾ ವೃದ್ಧರಿಗೆ ಆಹಾರ, ವಸತಿ, ಔಷಧಿ ಮತ್ತು ಇತರ ಅನುಕೂಲತೆಗಳನ್ನು ಒದಗಿಸಲಾಗುತ್ತಿದೆ. ಇದಲ್ಲದೆ ಇಲ್ಲಿಯ ನಿವಾಸಿಗಳಿಗೆ ತಕ್ಕಂತೆ ಧರ್ಮಾಚರಣೆ ಮಾಡಲು ಅವರಿಗೂ ಧರ್ಮಬೋಧನೆ ನೀಡಲಾಗುತ್ತದೆ.[೧]

**೧೨. ಆಸ್ಪತ್ರೆ:**

ಬಹಳ ಹಿಂದೆ ಇಲ್ಲಿ ಒಂದು ಸಣ್ಣ ಆಸ್ಪತ್ರೆ ಇತ್ತು. ೨೦೦೨ ರಲ್ಲಿ ಪರಮ ಪೂಜ್ಯ ಪೆನೋರೆರಿನ್‌ಪೋಚೆಯವರು ಒಂದು ಹೊಸ ಆಸ್ಪತ್ರೆಯನ್ನು ನಿರ್ಮಾಣ ಮಾಡಿದರು. ಮತ್ತೆ ಸುತ್ತಮುತ್ತ ಇರುವ ಎಲ್ಲರ ಆರೋಗ್ಯಕ್ಕಾಗಿ ೨೫-೪-೨೦೦೩ರಲ್ಲಿ ಸಕಲ ಸೌಲಭ್ಯ ಇರುವ ಬೃಹತ್ ಪ್ರಮಾಣದ ಆಸ್ಪತ್ರೆಯನ್ನು ನಿರ್ಮಿಸಿದ್ದಾರೆ.

**೧೩. ನೀರಿನ ಶುದ್ಧೀಕರಣ ಘಟಕಗಳು:**

ನಮ್ಮ ದೇಹದ ೭೫ ಭಾಗ ನೀರಿನಿಂದ ಆವರಿಸಲ್ಪಟ್ಟಿದೆ. ನಮ್ಮ ಉತ್ತಮ ಆರೋಗ್ಯಕ್ಕೆ ಪರಿಶುದ್ಧ ನೀರಿನ ಅತ್ಯವಶ್ಯಕತೆ ಇದೆ. ಆದ್ದರಿಂದ ಪ್ರಾಥಮಿಕ ಶಾಲೆ, ಈ ಸಂಸ್ಥೆ ಮತ್ತು ಸಂನ್ಯಾಸಿನಿಯರ ಆಶ್ರಮ ಮುಂದೆ ಒಂದೊಂದು ನೀರಿನ ಶುದ್ಧೀಕರಣ ಟ್ಯಾಂಕನ್ನು ನಿರ್ಮಿಸಲಾಗಿದೆ.

ಸ್ವರ್ಣದೇವಸ್ಥಾನದ ಎಡಭಾಗದಲ್ಲಿ ಪ್ರವಾಸಿಗರ ಉಪಯೋಗಕ್ಕಾಗಿ ಒಂದು ನೀರಿನ ಶುದ್ಧೀಕರಣ ಘಟಕವನ್ನು ನಿರ್ಮಿಸಲಾಗಿದೆ. ಈ ಶುದ್ಧೀಕೃತ ನೀರು ಅಂಗಡಿಗಳಲ್ಲಿ ದೊರೆಯುವ ನೀರಿಗಿಂತ ಪರಿಶುದ್ಧವಾಗಿದೆ ಎಂದು ನೀರಿನ ಪರಿಣಿತರು ಖಚಿತಪಡಿಸಿದ್ದಾರೆ. ಆದ್ದರಿಂದ ಪ್ರವಾಸಿಗರು ಅಂಗಡಿಗಳಿಂದ ನೀರನ್ನು ಕೊಳ್ಳುವ ಅವಶ್ಯಕತೆ ಇರುವುದಿಲ್ಲ.

---

೧. ಸ್ವರ್ಣದೇವಸ್ಥಾನ (Golden Temples) ಕನ್ನಡಕ್ಕೆ ಅನುವಾದ – ಡಿ.ಎನ್.ಪುರುಷೋತ್ತಮರಾವ್, ಪುಟ. ೮೩.

**೧೪. ಪ್ರಾರ್ಥನಾ ಚಕ್ರಗಳು:**

ಈ ಬೌದ್ಧ ವಿಹಾರದ ಪೂರ್ವದ್ವಾರದಿಂದ ಆರಂಭವಾಗಿ ಈ ವಿಹಾರವನ್ನು ಸುತ್ತುವರಿದ ಹಾದಿಯನ್ನು ಸುಮಾರು ೧೩೦೦ಕ್ಕಿಂತಲೂ ಹೆಚ್ಚಾದ ಪ್ರಾರ್ಥನಾ ಚಕ್ರಗಳಿಂದ ಅಲಂಕರಿಸಲಾಗಿದೆ. ಇವುಗಳಲ್ಲಿ ೧೯ ಬೃಹದಾಕಾರವಾಗಿರುವುವು ಇವೆ. ಈ ಪ್ರಾರ್ಥನಾ ಚಕ್ರಗಳನ್ನು ಭಕ್ತಿಯಿಂದ ಪ್ರದಕ್ಷಿಣೆ ಮಾಡಿ ಅವುಗಳನ್ನು ಬಲಭಾಗದಿಂದ ತಿರುಗಿಸಿದರೆ ಖಾಯಿಲೆಗಳಿಂದ ಮುಕ್ತರಾಗಿ ತಮ್ಮ ಜೀವಾವಧಿಯನ್ನು ವೃದ್ಧಿಸಿಕೊಂಡು ಮತ್ತು ಮುಂದಿನ ಜನ್ಮದಲ್ಲೂ ಸಂತೋಷವನ್ನು ಸಾಧಿಸಿಕೊಂಡಂತಾಗುತ್ತದೆ ಎಂಬ ನಂಬಿಕೆ ಬಲವಾಗಿದೆ.

**೧೫. ಸಮಾಜ ಸೇವೆಗಾಗಿ ಪಡೆದ ಪ್ರಶಸ್ತಿ:**

ತಾರೀಖು ೨೬ ಜನವರಿ ೨೦೦೫ರಂದು ಕರ್ನಾಟಕದ ರಾಜಧಾನಿಯಾದ ಬೆಂಗಳೂರಿನಲ್ಲಿ ಪರಮಪೂಜ್ಯ ಪೆನೊರ್‌ರಿನ್‌ಪೋಚೆಯವರು ಸಮಾಜ ಸೇವೆಗಾಗಿ ಪ್ರಶಸ್ತಿ ಪಡೆದಿದ್ದಾರೆ.[೧] ಈ ಪ್ರಶಸ್ತಿಯು ಇವರ ದಣಿಯದ ಅಸಮಾನ ಸಮಾಜ ಸೇವೆಯನ್ನು ಗುರುತಿಸಿ ನೀಡಲಾಯಿತು. ಈ ಪ್ರಶಸ್ತಿಯು ಕರ್ನಾಟಕ ಜನತೆಯ ಸಾಂಸ್ಕೃತಿಕ ಸಂಘ ನೀಡಿತು. ಈ ಸಂಘವು ೧೮೫೦ ವಿಭಾಗಗಳನ್ನು ಮತ್ತು ೬೫ ಸಾವಿರ ಸದಸ್ಯರನ್ನು ಒಳಗೊಂಡಿದೆ. ಈ ಪ್ರಶಸ್ತಿ ಪ್ರಧಾನ ಸಭೆಯಲ್ಲಿ ಕರ್ನಾಟಕದ ಮಾನ್ಯ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಧರ್ಮಸಿಂಗ್ ಅವರು ಅಧ್ಯಕ್ಷತೆ ವಹಿಸಿದ್ದರು. ಈ ಸಭೆಯಲ್ಲಿ ಹಿಂದೂ ಸಂತರು, ಕೇಂದ್ರ ಹಾಗೂ ರಾಜ್ಯ ಸರ್ಕಾರ ಪ್ರತಿನಿಧಿಗಳು ಮತ್ತು ಸಾವಿರಾರು ಸಾರ್ವಜನಿಕರು ಉಪಸ್ಥಿತರಿದ್ದರು. ಈ ಸಭೆಯಲ್ಲಿ ಪರಮಪೂಜ್ಯರು ಕರ್ನಾಟಕ ಸರ್ಕಾರವೂ ಸೇರದಂತೆ ಪ್ರಶಸ್ತಿ ನೀಡಿದ ಸಂಸ್ಥೆಗೂ ತಮ್ಮ ಸಮಾಜ ಸೇವೆಯನ್ನು ಗುರುತಿಸಿ ಪ್ರಶಸ್ತಿ ಪ್ರಧಾನ ಮಾಡಿದ್ದಕ್ಕಾಗಿ ಕೃತಜ್ಞತಾ ಭಾಷಣವನ್ನು ಮಾಡಿದರು. ಅಲ್ಲದೆ ಭಾರತ ಸರ್ಕಾರ ಮತ್ತು ಸ್ಥಳೀಯ ಜನರು ತಮಗೆ ಸಹಾಯ ಮಾಡುತ್ತಿರುವುದಕ್ಕಾಗಿಯೂ ಕೂಡ ತಮ್ಮ ಕೃತಜ್ಞತೆಯನ್ನು ಸಮರ್ಪಿಸಿದರು. ಈ ಸಂದರ್ಭದಲ್ಲಿ ಮಾತನಾಡಿದ ಅತಿಥಿಗಳೆಲ್ಲರೂ ಪರಮಪೂಜ್ಯರು ಸಮಾಜದ ಅಗಣಿತ ಭೌತಿಕ, ಆಂತರಿಕ, ಆಧ್ಯಾತ್ಮಿಕ ಮತ್ತು ಮಾನಸಿಕ ಬೆಳವಣಿಗೆಗೆ ಮಾಡಿದ ಅಭಿವೃದ್ಧಿಗಳಿಗಾಗಿ ಪಡೆದ ಪ್ರಶಸ್ತಿಗಾಗಿ ಶುಭ ಹಾರೈಸಿ, ಅವರ ಅನಂತ ಸಮಾಜ ಸೇವೆಗಾಗಿ ತಮ್ಮ ಕೃತಜ್ಞತೆಗಳನ್ನು ಸಮರ್ಪಿಸಿದ್ದಾರೆ.

---

೧. ಸ್ವರ್ಣದೇವಸ್ಥಾನ (Golden Temples) ಕನ್ನಡಕ್ಕೆ ಅನುವಾದ – ಡಿ.ಎನ್.ಪುರುಷೋತ್ತಮರಾವ್, ಪುಟ. ೮೪.

# ಅಧ್ಯಾಯ – ೫

# ಬೈಲುಕುಪ್ಪೆ ಟಿಬೆಟ್ಟಿಯನ್ನರ ಧಾರ್ಮಿಕ ಆಚರಣೆ ಮತ್ತು ಸಂಪ್ರದಾಯ

ಟಿಬೆಟಿಯನ್ನರು ಬೈಲುಕುಪ್ಪೆಯ ನಿರಾಶ್ರಿತ ತಾಣಗಳಲ್ಲಿ ತಮ್ಮ ಸಂಸ್ಕೃತಿಯನ್ನು ಉಳಿಸಿ ಬೆಳೆಸಿಕೊಂಡು ಹೋಗುತ್ತಿದ್ದಾರೆ. ಸುಮಾರು ೪೫ ವರ್ಷಗಳಿಂದಲೂ ಈ ಸ್ಥಳದಲ್ಲಿ ಆಶ್ರಯ ಪಡೆದುಕೊಂಡು ಇಲ್ಲಿಯ ಭೌಗೋಳಿಕತೆಗೆ ಹೊಂದಿಕೊಂಡು, ತಮ್ಮ ಬದುಕಿನ ಒಡನಾಟದಲ್ಲಿ ಅವಿನಾಭಾವತೆಯ ಸಂಬಂಧವನ್ನು ಶಾಶ್ವತವಾಗಿ ಉಳಿಸಿ ಬೆಳೆಸಿಕೊಂಡಿದ್ದಾರೆ. ಈ ಪ್ರದೇಶದ ಸುತ್ತಮುತ್ತ ಸ್ಥಳೀಯ ಭಾರತೀಯ ಹಳ್ಳಿಗಳು ಇದ್ದು ಈ ಜನರು ಒಡನಾಟವಿದ್ದರೂ ತಮ್ಮ ಸಂಸ್ಕೃತಿಗೆ ಧಕ್ಕೆ ಬರದ ರೀತಿಯಲ್ಲಿ ನೋಡಿಕೊಂಡಿದ್ದಾರೆ.[೧] ಮಾನವನ ಬದುಕಿನ ಒಟ್ಟು ಮೊತ್ತವೇ ಸಂಸ್ಕೃತಿ ಎಂಬಂತೆ ಟಿಬೆಟಿಯನ್ನರ ಬೆಳವಣಿಗೆಯಲ್ಲಿ ಪ್ರಭಾವಶಾಲಿಯಾದ ಸಾಂಸ್ಕೃತಿಕ ಅಂಶಗಳು ಅವರ ಬದುಕಿನೊಂದಿಗೆ ವ್ಯಾಪಕವಾದ ಸಂಬಂಧ ಹೊಂದಿರುವ ಸಂಸ್ಕೃತಿಯ ಪ್ರಮುಖ ಎಳೆಗಳನ್ನು ಗುರುತಿಸುವುದು ಈ ಅಧ್ಯಾಯದ ಮುಖ್ಯ ಉದ್ದೇಶವಾಗಿದೆ.

ಒಂದು ಸಾಮಾಜಿಕ ವರ್ಗ ಪರಂಪರಾಗತವಾಗಿ ಅನುಸರಿಸುತ್ತಾ ಬಂದಿರುವ ಕ್ರಿಯಾ ವಿನ್ಯಾಸವನ್ನು ಸಂಪ್ರದಾಯವೆನ್ನಬಹುದು. ಒಂದು ಸಾಮಾಜಿಕ ವರ್ಗದಲ್ಲಿ ಒಬ್ಬ ವ್ಯಕ್ತಿ ಅಭ್ಯಾಸ ಸಂಪ್ರದಾಯವಾಗುವುದಿಲ್ಲ. ಜನ ಏನು ಮಾಡುತ್ತಾರೆ ಎಂಬುದನ್ನು ತಿಳಿಸುವ ಸಂಪ್ರದಾಯದ ಪ್ರಮುಖ ಲಕ್ಷಣವೆಂದರೆ ಅದರ ಸಾಮೂಹಿಕತೆ ಹೀಗೆ ಟಿಬೆಟಿಯನ್ನರು ಸಂಪ್ರದಾಯಕವಾಗಿ ಅನೇಕ ವರ್ಷಗಳಿಂದ ತಮ್ಮ ಧರ್ಮ ಸಂಸ್ಕೃತಿಗನುಗುಣವಾಗಿ ಬೆಳೆದುಬಂದಿರುವ ಸಂಪ್ರದಾಯಗಳ ಮತ್ತು ನಂಬಿಕೆಗಳನ್ನು ನೆಚ್ಚಿಕೊಂಡು ಈಗಲೂ ಬದುಕುತ್ತಿದ್ದಾರೆ. ಸಂಪ್ರದಾಯಗಳ ತಲೆಮಾರಿನಿಂದ ತಲೆಮಾರಿಗೆ ಪ್ರವಹಿಸುತ್ತಿದೆ. ಇದರ ಸಂಸ್ಕೃತಿ ಸ್ಥಳೀಯ ಭಾರತೀಯರಿಗಿಂತ ಭಿನ್ನವಾದ ಆಚಾರ ವಿಚಾರಗಳನ್ನು ಒಳಗೊಂಡಿದೆ.

<u>**ಉಪಶೀರ್ಷಿಕೆಗಳು**</u>

**(೧) ಟಿಬೆಟಿಯನ್ನರು ಮತ್ತು ಆಚಾರ – ವಿಚಾರಗಳು:**

ಟಿಬೆಟ್ ದೇಶವು ಚೀನಾದ ಭೂಪಟದಲ್ಲಿ ಒಂದು ಸ್ವಾಯತ್ತ ಆಡಳಿತ ಪ್ರದೇಶ. ಈ ದೇಶವು ಬೌದ್ಧಧರ್ಮದ ದೇಶವಾಗಿದೆ. ಲಾಮಾ ಸಿದ್ಧಾಂತದ ಬಿಕ್ಕುಗಳೇ

---

೧. ಬೈಲುಕುಪ್ಪೆ ಟಿಬೆಟಿಯನ್ನರು ಒಂದು ಸಾಂಸ್ಕೃತಿಕ ಅಧ್ಯಯನ : ಎನ್.ಆರ್.ಚಂದ್ರೇಗೌಡ, ಪುಟ. ೮೦.

ಹಲವಾರು ವರ್ಷಗಳ ಕಾಲ ಈ ದೇಶವನ್ನಾಳಿದರು.[೧] ಸುತ್ತಲೂ ಬೆಟ್ಟಗುಡ್ಡಗಳಿಂದ ಆವೃತವಾಗಿರುವ ಈ ದೇಶ ಸಮುದ್ರಮಟ್ಟದಿಂದ ಸು. ೧೫೫೦೦ ಅಡಿಗಳಷ್ಟು ಎತ್ತರದಲ್ಲಿದ್ದು ಇದನ್ನು 'ಪ್ರಪಂಚದ ಮೇಲ್ಛಾವಣಿ' ಎಂದು ಕರೆಯಲಾಗಿದೆ. ಪ್ರಾರಂಭದಿಂದಲೂ ಟಿಬೆಟ್ ಮೇಲೆ ಚೀನಾ ತನ್ನ ಹಸ್ತಕ್ಷೇಪವನ್ನು ಮುಂದುವರಿಸುತ್ತಲೇ ಬಂದಿದೆ; ಟಿಬೆಟ್ ಮೇಲಿನ ತನ್ನ ಸಂಪೂರ್ಣ ಹಿಡಿತವನ್ನು ಸಾಧಿಸಿದೆ. ಆದ್ದರಿಂದ ಟಿಬೆಟ್ ಜನರು ಚೀನಾದ ಕಪಿಮುಷ್ಠಿಯಿಂದ ಮುಕ್ತರಾಗಲು ಹವಣಿಸುತ್ತಿದ್ದಾರೆ. ಅವರು ಸ್ವಾಯತ್ತ ಅಧಿಕಾರವನ್ನು ಕೇಳುತ್ತಿದ್ದಾರೆ. ಹೀಗೆ ತನ್ನ ಹೋರಾಟವನ್ನು ಮುಂದುವರಿಸಿದ ಟಿಬೆಟ್‌ಗೆ ೧೯೫೯ರಲ್ಲಿ ಒಂದು ದುರಂತವೇ ಕಾದಿದ್ದಿತು. ಅದುವೇ ಟಿಬೆಟ್ ಮೇಲಿನ ಚೈನಾದ ಆಕ್ರಮಣ. ಇದರ ಪರಿಣಾಮ ಟಿಬೆಟ್ ಚೀನಾದ ವಶವಾಯಿತು. ಲಕ್ಷಾಂತರ ಟಿಬೆಟಿಯನ್ನರು ನಿರಾಶ್ರಿತರಾದರು. ತಮ್ಮ ಮನೆ, ಮಠ, ಆಸ್ತಿ-ಪಾಸ್ತಿಗಳನ್ನು ಕಳೆದುಕೊಂಡು ರಾತ್ರೋರಾತ್ರಿ ಬೆಟ್ಟಗುಡ್ಡಗಳನ್ನು ದಾಟಿ ಬಂದು ಭಾರತ, ಭೂತಾನ್ ಮತ್ತು ನೇಪಾಳ ರಾಷ್ಟ್ರಗಳಲ್ಲಿ ಆಶ್ರಯ ಪಡೆದರು.

ವಿವಿಧತೆಯಲ್ಲಿ ಏಕತೆಯನ್ನು ಸಾರುವ ನಮ್ಮ ಭರತಭೂಮಿ ವಿವಿಧ ಧರ್ಮ, ಭಾಷೆ ಹಾಗೂ ಜನಾಂಗಗಳಿಗೆ ನೆಲೆಯಾಗಿದೆ. ಹೀಗೆ ಆಶ್ರಯ ಬೇಡಿ ಬಂದವರಲ್ಲಿ ಟಿಬೆಟಿಯನ್ನರೂ ಒಬ್ಬರು.

ಟಿಬೆಟಿಯನ್ನರ ಆಚಾರ ವಿಚಾರ ಹಾಗೂ ಸಾಮಾಜಿಕ ವ್ಯವಸ್ಥೆಯು ಕನ್ನಡಿಗರಿಗಿಂತ ಭಿನ್ನವಾಗಿದೆ. ನಮ್ಮ ಸಮಾಜದಲ್ಲಿ ಜಾತಿವ್ಯವಸ್ಥೆ ಆಳವಾಗಿ ಬೇರೂರಿದೆ.[೨] ಪ್ರತಿಯೊಂದು ಜಾತಿಯು ವಿವಿಧ ರೀತಿಯ ಆಚಾರವಿಚಾರಗಳನ್ನು ರೂಢಿಸಿಕೊಂಡಿದೆ. ಅವರ ಜಾತಿಯ ವಿವಿಧ ಹೆಸರುಗಳು ನಮಗೆ ತಿಳಿಯದಿದ್ದರೂ ಇವರಲ್ಲಿಯೂ ನಮ್ಮ ಸಮಾಜದಲ್ಲಿ ಕಂಡುಬರುವ ಮೇಲ್ವರ್ಗ ಹಾಗೂ ಕೆಳವರ್ಗಗಳು ಇರುವುದು ಕಂಡುಬರುತ್ತವೆ. ಇವರ ಜಾತಿಯಲ್ಲಿ 'ಕೊಂಗ್ವ' ಜಾತಿಯವರನ್ನು ಕಂಡರೆ ಅವರಲ್ಲಿಯೇ ದ್ವೇಷ ಸಂಖ್ಯೆಯಲ್ಲಿ ಕಡಿಮೆಯಿರುವ ಇವರು ಇಡೀ ಟಿಬೆಟಿಯನ್ ಕಾಲೋನಿಯನ್ನು ನಿಯಂತ್ರಿಸುತ್ತಾರೆ.

ಭಾರತೀಯರಷ್ಟೇ ಸಂಪ್ರದಾಯಬದ್ಧರಾದ, ಟಿಬೆಟಿಯನ್ನರು ಕಲ್ಯಾಣ, ಹುಟ್ಟು, ಸಾವುಗಳನ್ನು ಶಾಸ್ತ್ರಬದ್ಧವಾಗಿ ಆಚರಿಸುತ್ತಾರೆ.

೧. ಬೈಲುಕುಪ್ಪೆ ಟಿಬೆಟಿಯನ್ನರು ಒಂದು ಸಾಂಸ್ಕೃತಿಕ ಅಧ್ಯಯನ : ಎನ್.ಆರ್.ಚಂದ್ರೇಗೌಡ, ಪುಟ. ೮೧.

೨. ಅದೇ., ಪುಟ. ೮೨.

**ಅ) ಕಲ್ಯಾಣ ಅಥವಾ ಮದುವೆ:**

ಭಾರತೀಯ ಸಂಸ್ಕೃತಿಯಂತೆ ಟಿಬೆಟಿಯನ್ನರಲ್ಲಿಯೂ ಅನಾದಿಕಾಲದಿಂದ ಸಂಪ್ರದಾಯಬದ್ಧ ವಿವಾಹಗಳು ಏರ್ಪಡುತ್ತವೆ. ಹಿರಿಯರು ಹುಡುಗ ಹುಡುಗಿಯರನ್ನು ಆಯ್ಕೆ ಮಾಡಿದ ಅನಂತರ ಲಗ್ನ ಗುರುತಿಸುವ ಪದ್ಧತಿಯಿದ್ದು, ಲಗ್ನಕ್ಕಾಗಿ ಶುಭದಿನವನ್ನು ಗುರುತಿಸುತ್ತಾರೆ. ವಿವಾಹ ಮಹೋತ್ಸವವು ಬಹಳ ಆಡಂಬರದಿಂದ ನಡೆಯಲಿದ್ದು, ಉಡುಗೊರೆಯನ್ನು ಕೊಡುತ್ತಾರೆ.[೧] ಮದುವೆಗಳಿಗೆ ತಾಳಿಯ ಬದಲು ಕಿಬ್ಬೊಟ್ಟೆಯನ್ನು ಸೇರಿಸಿ ಒಂದು ಬಟ್ಟೆಯ (ಪಾಂಗ್ಡೆನ್) ತುಂಡನ್ನು ಕಟ್ಟುತ್ತಾರೆ. ಸಂಪ್ರದಾಯಶೀಲ ಟಿಬೆಟ್ ವಿವಾಹಿತ ಮಹಿಳೆಯರು ತಮ್ಮ ನಿಲುವಂಗಿ (ಜುಬ್ಬ) ಮೇಲೆ ಪಾಂಗೈನನ್ನು ಕಟ್ಟುತ್ತಾರೆ. ಇದರಿಂದ ವಿವಾಹಿತ ಮಹಿಳೆ ಎಂದು ತಿಳಿಯುತ್ತದೆ. ಟಿಬೆಟಿಯನ್ನರ ವಿವಾಹ ಸಮಾರಂಭಗಳು ಭಿನ್ನವಾಗಿವೆ. ವಧು ಮತ್ತು ವರನು ಯಾವ ಸಂಬಂಧವೂ ಆಗಿರಬಾರದು. ಇದು ಅವರ ನಿಯಮ. ಧಾರೆಯೆರೆಯುವ ಪದ್ಧತಿಯಿದ್ದು, ಮದುವೆಗೆ ಬಂದವರೆಲ್ಲರೂ ಮೊದಲು ದೇವರಿಗೆ ಹಾರ ಹಾಕಿ ಅನಂತರ ವಧು–ವರರಿಗೆ ಹಾರವನ್ನು ಹಾಕಿ, ಮನೆಮಂದಿಯನ್ನು ಒಟ್ಟಾಗಿ ಕೂರಿಸಿ ಉಡುಗೊರೆಯನ್ನು ಕೊಡುತ್ತಾರೆ. ಟಿಬೆಟಿಯನ್ನರಲ್ಲಿ ಬಹುಪತಿತ್ವ ಜಾರಿಯಲ್ಲಿದ್ದು ಒಂದು ಹೆಣ್ಣು ಅನೇಕ ಪುರುಷರನ್ನು ಮದುವೆಯಾಗಬಹುದು. ಅವಳು ಸಮ್ಮತಿಸಿದ್ದಲ್ಲಿ ಮಾತ್ರ. ಇಂತಹ ವ್ಯವಸ್ಥೆಯಲ್ಲಿ ಮನೆಯ ಹಿರಿಯಣ್ಣನನ್ನು ಗಂಡನೆಂದು ಪರಿಗಣಿಸಲಾಗುತ್ತದೆ. ಇಂದು ಕೆಲವು ಟಿಬೆಟಿಯನ್ನರು ಕನ್ನಡ ಮಹಿಳೆಯರನ್ನು ವಿವಾಹವಾಗಿರುವ ಉದಾಹರಣೆಗಳಿವೆ. ಅವರಲ್ಲಿ ಕೆಲವರಿಗೆ ಕನ್ನಡಿಗರಂತೆ ಮಕ್ಕಳೂ ಜನಿಸಿದ್ದಾರೆ. ಪ್ರಸ್ತುತ ಸಂದರ್ಭದಲ್ಲಿ ಬಹುಪತಿತ್ವ ಪದ್ಧತಿ ಕ್ಷೀಣಿಸುತ್ತಿದೆ. ಇದಕ್ಕೆ ಕಾರಣ ಆಧುನಿಕ ಜೀವನ ಕ್ರಮವೇ ಆಗಿದೆ.

**ಆ) ಜನನ:**

ಬೇರೆಲ್ಲಾ ಜನರು ಗಂಡು ಮಕ್ಕಳು ಜನಿಸುವುದರಿಂದ ಸಂತೋಷಪಟ್ಟರೆ, ಹೆಣ್ಣುಮಕ್ಕಳ ಜನನವಾದರೆ ಟಿಬೆಟಿಯನ್ನರು ಸಂತೋಷಪಡುತ್ತಾರೆ. ಹೆರಿಗೆ ಸಂದರ್ಭದಲ್ಲಿ ಸೂಲಗಿತ್ತಿಯರ ಸಹಾಯ ಪಡೆಯುತ್ತಾರೆ.[೨] ಮಗು ಜನಿಸಿದಾಗ ಶುಭಗಳಿಗೆಯನ್ನು ಅಂದರೆ ಪಂಚಾಂಗವನ್ನು ನೋಡುವ ಪರಿಪಾಠವಿದೆ. ಹುಟ್ಟಿನ

---

೧. ಬೈಲುಕುಪ್ಪೆ ಟಿಬೆಟಿಯನ್ನರು ಒಂದು ಸಾಂಸ್ಕೃತಿಕ ಅಧ್ಯಯನ : ಎನ್.ಆರ್.ಚಂದ್ರೇಗೌಡ, ಪುಟ. ೮೩.

೨. ಅದೇ., ಪುಟ. ೮೪.

ನಕ್ಷತ್ರದ ಆಧಾರದ ಮೇಲೆ ಮಗುವಿನ ನಾಮಕರಣ ಮಾಡುವ ಪದ್ಧತಿಯಿದೆ. ಈ ಕಾರ್ಯವನ್ನು ಲಾಮಗಳಿಂದಲೇ ನಡೆಸುತ್ತಾರೆ.

**(ಇ) ಸಾವು ಮತ್ತು ಶ್ರಾದ್ಧ ಆಚರಣೆ:**

ಮರಣದ ವಾರ್ತೆ ತಿಳಿದಾಗ ಲಾಮಾದವರು ಸತ್ತವರ ಮನೆಗೆ ಬಂದು ಶವವನ್ನು ಪೂಜಿಸಿ ವಿಹಾರದಿಂದ ತಂದ ತೀರ್ಥವನ್ನು ಶವದ ಬಾಯಲ್ಲಿ ಬಿಡುತ್ತಾರೆ. ಟಿಬೆಟಿಯನ್ನರ ಶವಸಂಸ್ಕಾರ ಕ್ರಿಯೆಯು ವಿಶಿಷ್ಟ ಹಾಗೂ ಭಿನ್ನವಾದುದು. ಸತ್ತ ವ್ಯಕ್ತಿಯನ್ನು ಮೂರು ಅಥವಾ ನಾಲ್ಕನೇ ದಿನದಂದು ಸುಡುತ್ತಾರೆ. ಲಾಮಾ ಬಂದು 'ಪಂಚಾಂಗ'ವನ್ನು ನೋಡಿ ಸುಡುವ ದಿನವನ್ನು ಗುರುತಿಸುವವರೆಗೆ ಶವವನ್ನು ಸುಡುವಂತಿಲ್ಲ. ಇದು ಒಂದು ವಾರವಾಗಲೂಬಹುದು ಅಥವಾ ಹದಿನೈದು ದಿನಗಳಾಗಲೂಬಹುದು. ಹೆಣದ ಮೇಲೆ ಬಿಳಿಯ ಬಟ್ಟೆಯನ್ನು ಮುಚ್ಚಿ ಇಬ್ಬರು ಶವವನ್ನು ಹೊತ್ತುಕೊಂಡು ಓಲಗ, ಸಂಗೀತಗಳಿಂದ ಅಂತ್ಯಕ್ರಿಯೆಯನ್ನು ಮುಗಿಸುತ್ತಾರೆ. ಯಾವುದಾದರೂ ಅಂಟುಜಾಡ್ಯದಿಂದ ಸತ್ತರೆ ಸುಡುವ ಪದ್ಧತಿಯನ್ನು ಅನುಸರಿಸುತ್ತಾರೆ. ನೂರೆಂಟು ದೀಪಗಳನ್ನು ಉರಿಸಿ ಸಾವಿನ ದಿನದಂದು ಪೂಜಿಸುತ್ತಾರೆ. ಕೊನೆಗೆ ೪೯ನೇ ದಿನದಂದು ಶ್ರಾದ್ಧವನ್ನು ನೆರವೇರಿಸುತ್ತಾರೆ. ಇವರಲ್ಲಿ ಪುನರ್ಜನ್ಮದ ನಂಬಿಕೆಯಿದ್ದು, ಸತ್ತ ಏಳು ದಿನಗಳವರೆಗೆ ಆತ್ಮ ಸಂಚರಿಸುತ್ತಿರುತ್ತದೆ ಎಂಬ ನಂಬಿಕೆಯನ್ನು ಹೊಂದಿದ್ದಾರೆ.[೧]

**(ಈ) ಆರೋಗ್ಯ:**

ಟಿಬೆಟಿಯನ್ನರು ನೋಡಲು ದೃಢಕಾಯವಾಗಿ ಗೋಧಿ ಬಣ್ಣದ ನುಣುಪಾದ ಚರ್ಮವನ್ನು ಹೊಂದಿದ್ದು ಆರೋಗ್ಯವಾಗಿ ಕಾಣುತ್ತಾರೆ. ಆದರೆ ಶೇ. ೭೦ರಷ್ಟು ಜನರಿಗೆ ಕ್ಷಯರೋಗ ಸಮಸ್ಯೆಯಿದೆ. ಸಾಮಾನ್ಯವಾಗಿ ಆಮಶಂಕೆ ರಕ್ತದೊತ್ತಡದ ಸಮಸ್ಯೆಯನ್ನು ಗಮನಿಸಬಹುದು. ಕ್ಷಯರೋಗ (ನಿವಾರಕ) ನಿರೋಧಕ ಚುಚ್ಚು-ಮದ್ದನ್ನು ಬಹಳಷ್ಟು ಉಪಯೋಗಿಸುವುದರಿಂದ ರೋಗವನ್ನು ಗುಣಪಡಿಸುತ್ತಿದ್ದಾರೆ.[೨]

**(ಉ) ಆಹಾರ:**

ಟಿಬೆಟಿಯನ್ನರು ಬಳಸುವ ಆಹಾರವೂ ವಿಶಿಷ್ಟವಾದುದು. ಇವರು ಶೀತಪ್ರದೇಶದಿಂದ ಬಂದಂತಹ ಜನರಾದ್ದರಿಂದ ಉಷ್ಣಪ್ರದೇಶದಲ್ಲಿ ನೆಲೆಸಿರುವುದರಿಂದ

೧. ಬೈಲುಕುಪ್ಪೆ ಟಿಬೆಟಿಯನ್ನರು ಒಂದು ಸಾಂಸ್ಕೃತಿಕ ಅಧ್ಯಯನ : ಎನ್.ಆರ್.ಚಂದ್ರೇಗೌಡ, ಪುಟ. ೮೫.

೨. ಅದೇ, ಪುಟ. ೮೬.

ಆಗಾಗ ತಂಪುಪಾನೀಯ ಐಸ್‌ಕ್ರೀಮನ್ನು ಉಪಯೋಗಿಸುತ್ತಾರೆ. ಇವರು ಗೋಧಿ, ಬಾರ್ಲಿಯನ್ನು ಆಹಾರವಾಗಿ ಉಪಯೋಗಿಸುತ್ತಾರೆ. ಮೈದಾ ಹಿಟ್ಟಿನಲ್ಲಿ ಚಪಾತಿಯನ್ನಾಗಿ ಮಾಡಿ ಅದರ ಮೇಲೆ ಮಾಂಸದ ಚೂರುಗಳನ್ನು ಹಾಕಿ ಮಡಚಿ ಬೇಯಿಸಿದ ನಂತರ ತಿನ್ನುತ್ತಾರೆ. ಇದು ಅವರ ಪ್ರಿಯವಾದ ಆಹಾರವಾಗಿದ್ದು ಇದಕ್ಕೆ 'ಮಮೆ' ಎಂದು ಕರೆಯುತ್ತಾರೆ. ಇವರು ಉಪಯೋಗಿಸುವ ಚಹಾ ಕೂಡ ಉಪ್ಪಾಗಿರುತ್ತದೆ. ರಾಗಿ ಮತ್ತು ಬತ್ತದಿಂದ ತಯಾರಿಸಿದ ಪಾನೀಯವನ್ನು ಅಂದರೆ 'ಚಾಂಗ್'ಅನ್ನು ವಿಶೇಷವಾಗಿ ಸೇವಿಸುತ್ತಾರೆ. ಇದು ಮನೆಯಲ್ಲೇ ತಯಾರಿಸಿದ ಮದ್ಯವೂ ಹೌದು. ಟಿಬೆಟಿಯನ್ನರು ಬೌದ್ಧರಾಗಿದ್ದರೂ ಮಾಂಸಹಾರಿಗಳೂ ಹೌದು. ಇವರು ದನದ ಮಾಂಸದ ಜೊತೆಗೆ ಕುರಿ, ಕೋಳಿ, ಹಂದಿ ಮತ್ತು ಆಡು ಇವೇ ಮುಂತಾದ ಪ್ರಾಣಿಗಳ ಮಾಂಸವನ್ನು ಆಹಾರವಾಗಿ ಬಳಸುತ್ತಾರೆ. ತಾವು ಪ್ರಾಣಿಗಳನ್ನು ಕೊಂದು ತಿನ್ನುವುದಕ್ಕಿಂತ ಬೇರೆಯವರಿಂದ ಕೊಲ್ಲಿಸಿ ತಿನ್ನುವುದು ಇವರ ಪರಿಪಾಠ. ಒಟ್ಟಿನಲ್ಲಿ ಟಿಬೆಟ್ ದೇಶ ಶೀತ ಪ್ರದೇಶವಾದ್ದರಿಂದ ಆಹಾರ ಧಾನ್ಯಗಳು ಹೆಚ್ಚಾಗಿ ಬೆಳೆಯದ ಕಾರಣ ಮಾಂಸಾಹಾರಿಗಳಾದರು. ಅವರು ಪ್ರಾಣಿಹಿಂಸೆ ಮಾಡಬಾರದೆನ್ನುವುದಕ್ಕೆ ೧೯೯೩ರಲ್ಲಿ ಪಿರಿಯಾಪಟ್ಟಣ ತಾಲ್ಲೂಕಿನ ಬೈಲುಕುಪ್ಪೆ ಪುನರ್ವಸತಿ ಕೇಂದ್ರದ ಕೈಲಾಸಪುರ ಶಿಬಿರದಲ್ಲಿ ಒಬ್ಬ ಟಿಬೆಟಿಗನು ಸಾಕಿದ ಸಾವಿರಾರು ಕೋಳಿಗಳನ್ನು ಬೇರೆಯವರಿಗೆ ಕೊಡಿಸಿ ಇನ್ನು ಮುಂದೆ ಕೋಳಿಗಳನ್ನು ಸಾಕಿ ಮಾಂಸಕ್ಕಾಗಿ ಕೊಲ್ಲಬಾರದೆಂಬ ಕಟ್ಟಾಜ್ಞೆಯನ್ನು ಹೊರಡಿಸಿದ ಸಂದರ್ಭವನ್ನು ಸ್ಮರಿಸಬಹುದು.

**ಟಿಬೆಟಿಯನ್ನರು ಬೌದ್ಧಧರ್ಮ ಅನುಯಾಯಿಗಳಾದರೂ ಮಾಂಸಾಹಾರಿಗಳೇಕೆ?**

ಬೌದ್ಧಧರ್ಮ ಅನುಯಾಯಿಗಳಲ್ಲಿ ಎರಡು ಪಂಗಡಗಳಿದ್ದು ಒಂದು ಮಹಾಯಾನ ಮತ್ತೊಂದು ಹೀನಯಾನವೆಂದು ಕರೆಯಲಾಗುವುದು.

ಹೀನಯಾನದ ಸಂಪ್ರದಾಯದವರು ಪಾಲಿ ಭಾಷೆಯಲ್ಲಿ ಬರೆದಿರುವ ಸೂತ್ರಗಳನ್ನು ಅನುಸರಿಸುತ್ತಾರೆ. ಇದು ಭಾರತದಿಂದ ಶ್ರೀಲಂಕ, ಥೈಲ್ಯಾಂಡ್, ಬರ್ಮಾ ದೇಶಗಳಲ್ಲಿ ಹರಡಿತು. ಇವರುಗಳು ಜ್ಞಾನಾರ್ಜನೆಗೋಸ್ಕರ ಧ್ಯಾನಮಾಡುತ್ತಾರೆ.

ಮಹಾಯಾನ ಸಂಪ್ರದಾಯದವರೇ ಈ ಟಿಬೆಟಿಯನ್ನರು. ಇವರು ಸಂಸ್ಕೃತದಲ್ಲಿ ಬರೆದಿರುವ ಉಪನಿಷತ್ತುಗಳನ್ನು ಅನುಸರಿಸುತ್ತಾರೆ. ಈ ಗುಂಪಿನ ಜನರನ್ನು ಚೀನಾ, ಟಿಬೆಟ್, ಜಪಾನ್, ಕೊರಿಯಾ, ವಿಯಟ್ನಾಂಗಳಲ್ಲಿ ಕಾಣಬಹುದು.

ಮಹಾಯಾನ ಅದರಲ್ಲೂ ವಜ್ರಯಾನವನ್ನು ಅನುಸರಿಸುವ ಟಿಬೆಟಿಯನ್ನರು ಮುಖ್ಯವಾಗಿ ಪ್ರೀತಿ ಮತ್ತು ದಯೆ ಎಂಬ ತತ್ವವನ್ನು ಹಾಗೂ ಪವಿತ್ರ ಭೂಮಿಯಲ್ಲಿ ಅಮಿತಭ ಬುದ್ಧ ಪುನರ್ಜನ್ಮಿಸುತ್ತಾನೆ ಎಂಬ ನಂಬಿಕೆ ಹೊಂದಿದ್ದಾರೆ. ಮಹಾಯಾನ ತೆರವಾಡ ಗುಂಪಿಗೆ ಸೇರಿದವರು. ಇವರು ಮಾಂಸಾಹಾರಿಗಳಾಗಿದ್ದಾರೆ. ವಜ್ರಯಾನದಲ್ಲಿ ನಾಲ್ಕು ವರ್ಗಗಳಿವೆ. ಕೆಲವರು ಆಂತರಿಕ ಶುಚಿತ್ವ ಮತ್ತು ಮಾನಸಿಕ ಶುದ್ಧತೆಗಾಗಿ ಮಾಂಸ ತಿನ್ನುವುದಿಲ್ಲ. ಆದರೆ ಅರ್ಹ ಧ್ಯಾನಿಗಳು ತಮ್ಮ ಧ್ಯಾನಕ್ಕೋಸ್ಕರ ನರಮಂಡಲಗಳನ್ನು ಶಕ್ತಿಯುತಗೊಳಿಸಲು ಮಾಂಸಾಹಾರಿಗಳಾಗಿದ್ದಾರೆ. ಆದರೆ ಪ್ರಾಣಿಹಿಂಸೆ ಮಾಡುವುದಿಲ್ಲ.

ಎರಡನೆಯದಾಗಿ ಟಿಬೆಟ್ ಭೌಗೋಳಿಕವಾಗಿ ಶೀತವಲಯದಲ್ಲಿದ್ದು ಮಾಂಸಾಹಾರಿ–ಗಳಾಗದಿದ್ದರೆ ಜನರು ಜೀವಿಸಲು ಸಾಧ್ಯವಿಲ್ಲದೆ ಇರುವುದು ಒಂದು ಕಾರಣ.

ಮೂರನೆಯದಾಗಿ ಹಿಂದೂಧರ್ಮವು ಪ್ರಾಣಿವಧೆಯನ್ನು ಉತ್ತೇಜಿಸುತ್ತಿದ್ದು, ಜೈನಧರ್ಮವು ಸಂಪೂರ್ಣವಾಗಿ ಪ್ರಾಣಿವಧೆಯನ್ನು ನಿಷೇಧಿಸಿದೆ. ಬೌದ್ಧಧರ್ಮವು ಇವೆರಡರ ಮಧ್ಯಮಾರ್ಗದಲ್ಲಿ ಚಲಿಸುವಂತಾಗಿದ್ದು ಎರಡು ತತ್ವಗಳನ್ನು ಎತ್ತಿಹಿಡಿಯುತ್ತದೆ. ಒಂದು, ಅವಶ್ಯಕತೆಯಿಂದ ಕೊಲ್ಲುವುದು ಹಾಗೂ ಕೊಲ್ಲುವ ಉದ್ದೇಶದಿಂದ ಕೊಲ್ಲುವುದು ಎರಡು, ಕೊಲ್ಲಲೇಬೇಕೆಂಬ ಗುರಿಯಿಂದ ಕೊಂದರೆ ಮಹಾಪಾಪವೋ, ಅವಶ್ಯಕತೆಯಿದ್ದು ಕೊಂದರೆ ಪಾಪವಲ್ಲವೆಂದು, ಬೌದ್ಧಧರ್ಮದಲ್ಲಿ ಸ್ಪಷ್ಟೀಕರಿಸಲಾಗಿದೆ ಎಂದು ಡಾ. ಬಿ.ಆರ್.ಅಂಬೇಡ್ಕರ್‌ರವರು ಹೇಳುತ್ತಾರೆ. ಆದ್ದರಿಂದ ಟಿಬೆಟ್‌ನಲ್ಲಿ ಜನರಿಗೆ ಸಸ್ಯೇತರ ಆಹಾರದ ಅವಶ್ಯಕತೆಯಿರುವುದರಿಂದ ಯಾಕ್ ಮೃಗಗಳನ್ನು ಕೊಂದು ತಿನ್ನುತ್ತಿದ್ದರು. ಭಾರತಕ್ಕೆ ಬಂದ ನಂತರ ಬೇರೆ ಜನರ ಮೂಲಕ ಪ್ರಾಣಿಗಳನ್ನು ಕೊಲ್ಲಿಸಿ ಮಾಂಸವನ್ನು ಆಹಾರವಾಗಿ ಉಪಯೋಗಿಸುತ್ತಾರೆ. ಆದರೆ ಅವರು ಮಾತ್ರ ಕೊಲ್ಲುವುದಿಲ್ಲ.

**ಉದಾ:** ೧೯೯೩ರಲ್ಲಿ ಮೈಸೂರು ಜಿಲ್ಲೆಯ ಪಿರಿಯಾಪಟ್ಟಣ ತಾಲ್ಲೂಕಿನ ಬೈಲುಕುಪ್ಪೆ ಪುನರ್ವಸತಿ ಕೇಂದ್ರದಲ್ಲಿ ಒಬ್ಬ ಟಿಬೆಟಿಯನ್ನರು ಸಾಕಿದ್ದಂತಹ ಸಾವಿರಾರು ಕೋಳಿಗಳನ್ನು ದಾನವಾಗಿ ಬೇರೆ ಜನರಿಗೆ ಕೊಡಿಸಿ ಇನ್ನು ಮುಂದೆ ಕೋಳಿಗಳನ್ನು

ಸಾಕಿ ಮಾಂಸಕ್ಕಾಗಿ ಕೊಲ್ಲಬಾರದೆಂಬ ಕಟ್ಟಾಜ್ಞೆ ಹೊರಡಿಸಿದ ಸಂದರ್ಭವನ್ನು ಇಲ್ಲಿ ಸ್ಮರಿಸಬಹುದು.

**ಊ) ಉಡುಪು:**

ಟಿಬೆಟಿಯನ್ನರ ಉಡುಪು ಬೇರೆ. ಜನರ ಉಡುಪಿಗೆ ಭಿನ್ನವಾದುದು. ಅಲ್ಲದೆ ವಿಶಿಷ್ಟವಾದುದು ಕೂಡ. ಗಂಡಸರು ಶರ್ಟು ಮತ್ತು ಪ್ಯಾಂಟನ್ನು ಇತ್ತೀಚೆಗೆ ಧರಿಸಿದರೂ ಅವರು ನಿಲುವಂಗಿ ಮತ್ತು ಉದ್ದ ತೋಳಿನ ನಿಲುವಂಗಿಗಳನ್ನು ಧರಿಸುತ್ತಾರೆ. ಹೆಂಗಸರು ಸೀರೆ ಮತ್ತು ಕುಪ್ಪಸವನ್ನು ತೊಡದೇ ನಿಲುವಂಗಿ ಮತ್ತು ಉದ್ದ ತೋಳಿನ ಕುಪ್ಪಸವನ್ನು ತೊಡುತ್ತಾರೆ. ಇತ್ತೀಚಿನ ನವೀನ ಹುಡುಗರಂತೆ, ಹುಡುಗಿಯರೂ ಕೂಡ ಜೀನ್ಸ್ ಪ್ಯಾಂಟ್ ಹಾಗೂ ಉದ್ದ ತೋಳುಳ್ಳ ಶರ್ಟ್ ಅಥವಾ ಟೀ ಶರ್ಟ್‌ಗಳನ್ನು ಧರಿಸುತ್ತಾರೆ. ಇತ್ತೀಚಿನ ದಿನಗಳಲ್ಲಿ ಗಂಡಸರು ಶರ್ಟ್ ಮತ್ತು ಪ್ಯಾಂಟನ್ನು ಸಾಮಾನ್ಯವಾಗಿ ಧರಿಸುತ್ತಾರೆ.



**ಋ) ಉದ್ಯೋಗ:**

ಪ್ರಾರಂಭದಲ್ಲಿ ವ್ಯವಸಾಯವನ್ನೇ ಪ್ರಧಾನ ಕಸುಬನ್ನಾಗಿ ಹೊಂದಿದ್ದ ಇವರು ಇತ್ತೀಚೆಗೆ ಸ್ವೆಟರ್, ಎಲೆಕ್ಟ್ರಾನಿಕ್ಸ್ ವಸ್ತುಗಳು, ಪಾದರಕ್ಷೆಗಳ ವ್ಯಾಪಾರ, ಹೈನುಗಾರಿಕೆ ಮತ್ತು ಜಮಖಾನಗಳನ್ನು (ಉಣ್ಣೆಯ) ನೇಯುವ ಕೆಲಸವನ್ನು ಮಾಡಿ ಹಣ ಸಂಪಾದಿಸುತ್ತಾರೆ.

ಟಿಬೆಟಿಯನ್ನರಿಗೆ ಹಾಗೂ ಬಡಜನತೆಗೆ ಅನುಕೂಲವಾಗುವಂತೆ ನಿರುದ್ಯೋಗಿಗಳಿಗೆ ಉದ್ಯೋಗ ದೊರಕಿಸುವ ನಿಟ್ಟಿನಲ್ಲಿ ಕೆಲವು ಕಾಫಿ ಕ್ಯೂರಿಂಗ್ ವರ್ಕ್ಸ್‌ಗಳನ್ನು ಸ್ಥಾಪಿಸಲಾಗಿದೆ.

**೧) ಟಿಬೆಟಿಯನ್ ಕಾಫಿ ಕ್ಯೂರಿಂಗ್ ವರ್ಕ್ಸ್ – ಬೈಲುಕುಪ್ಪೆ:**

೧೯೯೯ರಲ್ಲಿ ಈ ಕೈಗಾರಿಕೆ ಪ್ರಾರಂಭವಾಯಿತು. ಕಾಫಿ ಬೆಳೆಗಾರರಿಂದ ನೇರವಾಗಿ ಕಾಫಿ ಬೀಜವನ್ನು ಖರೀದಿಸಲಾಗುತ್ತದೆ. ಅನಂತರ ಹದಗೊಳಿಸಲಾಗುತ್ತದೆ.

ಮಧ್ಯವರ್ತಿಗಳ ಮುಖಾಂತರ ಹೊರ ರಾಷ್ಟ್ರಗಳಿಗೆ ಕಾಫಿಯನ್ನು ಕಳುಹಿಸಲಾಗುವುದು. ೧೦೦ ಜನ ಕಾರ್ಮಿಕರಿದ್ದು ಪ್ರೇಮತ್ಸ್ಯಾಗ್ ಎಂಬುವರು ಟಿಬೆಟ್ ಮಾಲೀಕರಾಗಿದ್ದಾರೆ.

**೨) ಟಿಬೆಟಿಯನ್ ಕೈಗಾರಿಕೋದ್ಯಮ ಸಂಸ್ಥೆ, ಒಂದನೇ ಕ್ಯಾಂಪ್ ಬೈಲುಕುಪ್ಪೆ:**

**ಗುಡಿಕೈಗಾರಿಕೆ:**

ಟಿಬೆಟಿಯನ್ ನಿರಾಶ್ರಿತರ ಜೀವನೋಪಾಯಕ್ಕೆ ಪ್ರಾರಂಭವಾದ ಕೈಗಾರಿಕೆ, ಕಾರ್ಪೆಟ್‌ಗಳು ಮತ್ತು ಗಂಧದ ಕಡ್ಡಿ ಸಂಸ್ಕರಣೆ ಕೈಗಾರಿಕೆಯ ಪ್ರಮುಖ ಉತ್ಪನ್ನಗಳು.

೧೯೬೪ರಲ್ಲಿ ಪ್ರಾರಂಭವಾದ ಕೈಗಾರಿಕೆಯು ೧೦೦ ಕಾರ್ಮಿಕರನ್ನು ಹೊಂದಿದೆ. ಇದಕ್ಕೆ ಟಿಬೆಟಿಯನ್ ಕೋ. ಆಪರೇಟಿವ್ ಸೊಸೈಟಿ ಮಾತೃಸಂಸ್ಥೆಯಾಗಿದೆ. ಪ್ರಥಮವಾಗಿ ಉಣ್ಣೆಯಿಂದ ಜಮಖಾನವನ್ನು ತಯಾರಿಸಲಾಗುವುದು. ಇದಕ್ಕೆ ವಿದೇಶದಿಂದ ಆಮದು ಮಾಡಿಕೊಳ್ಳುವ ಕಚ್ಚಾ ಉಣ್ಣೆ ಬೇಕಾದ ವಸ್ತುವಾಗಿದೆ. ನ್ಯೂಜಿಲ್ಯಾಂಡ್, ಆಸ್ಟ್ರೇಲಿಯಾ ಲಡಾಕ್ – ಲೇ (ಟಿಬೆಟ್‌ನ ಸಮೀಪ)ನಿಂದ ಉಣ್ಣೆಯನ್ನು ತರಿಸಲಾಗುವುದು. ರಾಜಸ್ಥಾನದಿಂದ ಹತ್ತಿಯನ್ನು ತರಿಸಲಾಗುತ್ತದೆ. ಇದರಿಂದ ಜಮಖಾನವನ್ನು ತಯಾರಿಸಲಾಗುತ್ತದೆ. ನಿರುದ್ಯೋಗ ಸಮಸ್ಯೆ ನಿವಾರಣೆಗೆ ಕೈಗಾರಿಕೋದ್ಯಮ ಸಂಸ್ಥೆಯ ಮಾರ್ಗೋಪಾಯ ಈ ಕೈಗಾರಿಕೆಯ ಉದ್ದೇಶವಾಗಿದೆ.[೧]

ತಯಾರಾದ ಜಮಖಾನವನ್ನು ಸ್ಥಳೀಯ ಮಾರುಕಟ್ಟೆ ಮತ್ತು ವಿದೇಶಗಳಿಗೆ ಮಧ್ಯವರ್ತಿ ಏಜಂಟರುಗಳಾದ ಟಿಬೆಟಿಯನ್ ಚಾರಿಟರಿ ಎಕ್ಸ್‌ಪೋರ್ಟ್ಸ್ ಮತ್ತು ಲೆಮೂಸ್ ಎಂಟರ್‌ಪ್ರೈಸಸ್ ಅವರ ಮೂಲಕ ಮಾರಾಟ ಮಾಡಲಾಗುವುದು.

ಹರಿಯಾಣದಿಂದ ತರಿಸಲಾಗುವ ಉಣ್ಣೆಯಿಂದ ಜಮಖಾನ ತಯಾರಿಸಿ ಟಿಬೆಟಿಯನ್ ಚಾರಿಟಬಲ್ ಸಂಸ್ಥೆಯು ಬೆಂಗಳೂರು ಮತ್ತು ಟಿಬೆಟಿಯನ್ ನಿರಾಶ್ರಿತರ ಗೃಹಕೈಗಾರಿಕೆ ಸಂಸ್ಥೆ, ದೆಹಲಿ ಇವರ ಮುಖಾಂತರ ಮಾರಾಟ ಮಾಡುತ್ತದೆ.

**೩) ಟಿಬೆಟಿಯನ್ ಅಗರಬತ್ತಿ ತಯಾರಿಕಾ ಸಂಸ್ಥೆ:**

೧೯೮೭ರಲ್ಲಿ ಪ್ರಾರಂಭವಾದ ಈ ಕೈಗಾರಿಕೆಯು ಅತಿ ಹೆಚ್ಚಿನ ಪ್ರಚಾರ ಇಲ್ಲದೆ ಇದ್ದರೂ ನಿರಾಶ್ರಿತರಿಗೆ ಕೂಲಿ ಕೆಲಸ ಸಿಗುವ ಕಾರ್ಯ ಇಲ್ಲಿ ಸಾಧ್ಯವಾಗಿದೆ. ಸುಮಾರು ೨೦ ಜನ ಕಾರ್ಮಿಕರು ಕೆಲಸ ನಿರ್ವಹಿಸುತ್ತಿದ್ದಾರೆ. ಕಾಲಿಘಾಂಗ್ ಮತ್ತು ಪಂಜಾಬ್‌ನಿಂದ ಕಚ್ಚಾವಸ್ತುಗಳನ್ನು ತಯಾರಿಸಲಾಗುತ್ತಿದೆ. ಮೈಸೂರಿನಿಂದ ಕೆಲವು ಪದಾರ್ಥಗಳನ್ನು ತರಲಾಗುತ್ತಿದೆ. ಗಂಧದಕಡ್ಡಿ ಅಂದರೆ ಕಡ್ಡಿಯಿಲ್ಲದೆ ಒತ್ತುವುದರಿಂದ

---

೧. ಬೈಲುಕುಪ್ಪೆ ಟಿಬೆಟಿಯನ್ನರು ಒಂದು ಸಾಂಸ್ಕೃತಿಕ ಅಧ್ಯಯನ : ಎನ್.ಆರ್.ಚಂದ್ರೇಗೌಡ, ಪುಟ. ೮೮.

ತಯಾರಿಸಲಾಗುವುದು. ಮರದ ಹೊಟ್ಟು, ಮೇಣ, ಗುಗ್ಗುಲ್‌ಕೋಟ ಕಾರಮ್ ರಾಯಲ್, ಕರ್ಪೂರ, ಮುಲಾತಿ, ಕಾರಜುವ, ವ್ರಾಚ್, ಲೂಂಗ್, ಜೈಪಾಲ್ ಪೂಲ್‌ಕುಸುಮ್, ಬಾರ್ರಾಸಿ ಮುಂತಾದ ರಾಸಾಯನಿಕ ಮಿಶ್ರಣಗಳಿಂದ ತಯಾರಿಸಲಾಗುವುದು.

ತಯಾರಿಸಲಾದ ಗಂಧದಕಡ್ಡಿಯನ್ನು ಹೊರದೇಶಗಳಿಗೆ ಕಳಿಸಲಾಗುತ್ತದೆ. ಮೈಸೂರು ಜಿಲ್ಲೆಯ ಕೊಳ್ಳೇಗಾಲ, ಹುಣಸೂರು, ಪಿರಿಯಾಪಟ್ಟಣ ಮುಂತಾದ ಸ್ಥಳಗಳಲ್ಲಿ ಮಾರಾಟ ಮಾಡಲಾಗುತ್ತದೆ.

ಈ ಎಲ್ಲಾ ಕೈಗಾರಿಕೆಗಳಿಂದ ಪಿರಿಯಾಪಟ್ಟಣದ ತಾಲ್ಲೂಕಿನ ಜನರಿಗೆ ಉದ್ಯೋಗಾವಕಾಶ ದೊರೆತಿದ್ದು ತಾಲ್ಲೂಕಿನ ಶ್ರೀಮಂತಿಕೆ ವೃದ್ಧಿಸಲು ಸಹಕಾರಿಯಾಗಿವೆ.

**೨. ಬೈಲುಕುಪ್ಪೆ ಟಿಬೆಟ್ಟಿಯನ್ನರ ಊಟೋಪಚಾರ ವಿಧಾನ:**

ಟಿಬೆಟಿಯನ್ನರು ದಿನಕ್ಕೆ ಮಾಮೂಲಿನಂತೆ ಮೂರು ಬಾರಿ ಆಹಾರವನ್ನು ಸೇವಿಸುತ್ತಾರೆ. ಅದರಲ್ಲಿ ಬೆಳಿಗ್ಗೆ ಮಧ್ಯಾಹ್ನದ ಆಹಾರ ಉಪಹಾರದ ರೀತಿಯಲ್ಲಿರುತ್ತದೆ.[೧] ರಾತ್ರಿಯ ಸಮಯದಲ್ಲಿ ಊಟವನ್ನು ಸಿದ್ಧಪಡಿಸಿ ಸೇವಿಸುತ್ತಾರೆ. ಉಪಹಾರ ಮತ್ತು ಊಟದಲ್ಲಿ ಅನ್ನ, ಸಾಂಬಾರು, ಸೊಪ್ಪು, ಟೀ(ಚಹಾ)ಯನ್ನು ಬಳಸುತ್ತಾರೆ. ಇವರಲ್ಲಿ ಟೀಯನ್ನು 'ಬಟರಡೀ' ಎಂದು ಕರೆಯುತ್ತಾರೆ. ಇದು ಇವರಿಗೆ ಹೆಚ್ಚು ಹೆಸರುವಾಸಿಯಾಗಿದೆ. ಇವರು ಟೀಪುಡಿಯನ್ನು ನೀರಿನಲ್ಲಿ ಹಾಕಿ ಕುದಿಸುತ್ತಾರೆ. ಕುದಿಸುವಾಗ ಸಾವಿನಲ್ಲಿ ಚೆನ್ನಾಗಿ ಕಲಕಿ ಅದಕ್ಕೆ ಉಪ್ಪು ಸೋಡಾ ಹಾಗೂ ಬೆಣ್ಣೆಯನ್ನು ಹಾಕುತ್ತಾರೆ. ಈ ರೀತಿ ಬೆರೆಸಿದ ನಂತರ ಸುಮಾರು ೧೫-೨೦ ನಿಮಿಷದಿಂದ ಒಂದು ಗಂಟೆಯವರೆಗೂ ಚೆನ್ನಾಗಿ ಕಾಯಿಸಿದ ನಂತರ ಸೋಸಿ ಉಪಯೋಗಿಸುತ್ತಾರೆ.[೨] ಇದನ್ನು ಸಾಮಾನ್ಯವಾಗಿ ಉಪಹಾರ ಮತ್ತು ಊಟವಾದ ನಂತರ ಸೇವಿಸುತ್ತಾರೆ. ಲಾಮಾಗಳು ಸಾಮಾನ್ಯವಾಗಿ ಕುಡಿಯುವುದಕ್ಕೆ ಉಪಯೋಗಿಸುವ ಲೋಟ ಮತ್ತು ಊಟ ಮಾಡುವ ತಟ್ಟೆಗಳಲ್ಲಿ ೮ ಅದೃಷ್ಟ ಚಿಹ್ನೆಗಳನ್ನು ಒಳಗೊಂಡಿರುತ್ತಾರೆ. ಇದರಲ್ಲಿ ತಾವರೆ ಹೂ ಧಾರ್ಮಿಕವಾಗಿ ದಂತಕತೆಯಲ್ಲಿ ಬರುವ ಪ್ರಾಣಿಪಕ್ಷಿಗಳ ಚಿಹ್ನೆಯ ಚಿತ್ರಗಳನ್ನು ಕೆತ್ತಲಾಗಿರುತ್ತದೆ.

---

೧. ಬೈಲುಕುಪ್ಪೆ ಟಿಬೆಟಿಯನ್ನರ ಒಂದು ಅಧ್ಯಯನ : ಹೆಚ್.ಎನ್.ರಾಮಕೃಷ್ಣ, ಪುಟ. ೬೪.
೨. ಅದೇ, ಪುಟ. ೬೫.

ಇವುಗಳನ್ನು ಉಪಯೋಗಿಸಿದರೆ ಒಳ್ಳೆಯದಾಗುತ್ತದೆ ಎಂದು ನಂಬಿಕೆಯಿದೆ. ಇಲ್ಲಿಯೇ ಸಾಮಾನ್ಯ ಜನರು ಆಧುನಿಕ ಮಾದರಿಯ ಪಾತ್ರೆಗಳನ್ನು ಬಳಸುತ್ತಾರೆ.

ಟಿಬೆಟಿಯನ್ನರು ಉಪಹಾರಕ್ಕೆ ತುಪ್ಪದಿಂದ ಮಾಡಿದ ತಿಂಡಿಯನ್ನು ಅಕ್ಕಿಹಿಟ್ಟು, ಗೋಧಿಹಿಟ್ಟು, ತರಕಾರಿ, ಮೊಟ್ಟೆ, ಮಾಂಸಗಳಿಂದ ತಯಾರಿಸಿರುತ್ತಾರೆ. ಇದನ್ನು ತಿನ್ನಲು ಚಮಚಗಳನ್ನು ಬಳಸಲಾಗುತ್ತದೆ. ಇದರ ಜೊತೆಗೆ ಮಾಂಸದ ಗೊಜ್ಜನ್ನು ಬಳಸುತ್ತಾರೆ. ಸಾಮಾನ್ಯವಾಗಿ ಮಾಂಸವು ಕುರಿ, ಹಂದಿ, ಕೋಳಿ ಮತ್ತು ದನಗಳ ಮಾಂಸವನ್ನು ಉಪಯೋಗಿಸುತ್ತಾರೆ. ಇದಾದ ಮೇಲೆ ಬಾರ್ಲಿಯಿಂದ ಮಾಡಿದ ಪಾನೀಯವನ್ನು ಸೇವಿಸುತ್ತಾರೆ. ರಾತ್ರಿ ಊಟಕ್ಕೆ ಚಪಾತಿ, ಪರೋಟ, ಅನ್ನ, ತರಕಾರಿ ಮತ್ತು ಮಾಂಸದಿಂದ ಮಾಡಿದ ಸಾಂಬಾರು ಬಳಸುತ್ತಾರೆ. ಇದರ ಜೊತೆಗೆ ಹಲವಾರು ರೀತಿಯ ತಿಂಡಿ ತಿನಿಸುಗಳು, ಮೊಟ್ಟೆ, ಕಡಲೆಬೀಜ, ತರಕಾರಿಗಳಿಂದ ತಯಾರಿಸಿದ ಪಲ್ಯ ಮತ್ತು ಮೀನುಗಳನ್ನು ಫ್ರೈಮಾಡಿ ತಿನ್ನುತ್ತಾರೆ. ಬಾರ್ಲಿಯಿಂದ ಮಾಡಿದ ಸಿಹಿ ತಿನಿಸುಗಳನ್ನು ಸೇವಿಸುತ್ತಾರೆ. ಇದನ್ನು ಇವರು ಮಾಮಾ ಎಂದು ಕರೆಯುತ್ತಾರೆ. ಇದು ಇವರಿಗೆ ಹೆಚ್ಚು ಪ್ರಿಯವಾದ ತಿನಿಸಾಗಿದೆ. ಊಟವಾದ ನಂತರ ಹಣ್ಣುಹಂಪಲುಗಳನ್ನು ತಿನ್ನುತ್ತಾರೆ. ಕೈಕಾಲುಗಳನ್ನು ಶುದ್ಧವಾಗಿ ತೊಳೆದು ಕರವಸ್ತ್ರಗಳಲ್ಲಿ ಕೈಗಳನ್ನು ಒರೆಸಿಕೊಂಡು ಸಾಮಾನ್ಯವಾಗಿ ಹೆಂಗಸರು ಮತ್ತು ಗಂಡಸರು ಯಾವುದೇ ರೀತಿಯ ಭಿನ್ನಭೇದಗಳಿಲ್ಲದೆ ಒಂದೇ ರೀತಿಯ ಊಟವನ್ನು ಮಾಡುತ್ತಾರೆ. ಹಾಲು, ಹಯನ, ಮೊಸರು, ಬೆಣ್ಣೆಯನ್ನು, ಹೇರಳವಾಗಿ ಉಪಯೋಗಿಸುತ್ತಾರೆ. ಆಹಾರವನ್ನು ತಯಾರಿಸುವುದಕ್ಕೆ ಸೌದೆ, ಸೀಮೆಎಣ್ಣೆ ಸ್ಟೌವ್ ಮತ್ತು ಗ್ಯಾಸ್ ಸಿಲಿಂಡರ್‌ಗಳನ್ನು ಬಳಸುತ್ತಾರೆ. ಇವರು ಅಡುಗೆಗಳನ್ನು ಹೆಂಗಸರೇ ಮಾಡಬೇಕು ಎಂಬ ನಿಬಂಧವಿಲ್ಲ. ಗಂಡಸರು ಸಾಮಾನ್ಯವಾಗಿ ಹೆಚ್ಚಾಗಿ ಅಡುಗೆ ಮಾಡುವುದನ್ನು ಕಲಿತು ತೊಡಗಿಸಿಕೊಂಡಿದ್ದಾರೆ. ಮನೆಯಲ್ಲಿ ಯಾರಿರುತ್ತಾರೋ ಅವರೇ ಸಿದ್ಧಪಡಿಸುತ್ತಾರೆ. ಇತ್ತೀಚೆಗೆ ಟಿಬೆಟಿಯನ್ನರ ಊಟೋಪಚಾರಗಳಲ್ಲಿ ಸಾಕಷ್ಟು ಬದಲಾವಣೆಗಳು ಕಂಡುಬರುತ್ತವೆ. ಇದಕ್ಕೆ ಕಾರಣವೆಂದರೆ ಇಲ್ಲಿಯ ಪರಿಸರ, ಹವಾಮಾನ ಮತ್ತು ಸ್ಥಳೀಯ ಜನರ ಒಡನಾಟ ಇವೆಲ್ಲದರ ಪ್ರಭಾವದಿಂದ ಬದಲಾವಣೆಗಳಾಗಿವೆ. ಆದರೆ ತಮ್ಮ ಸಾಂಪ್ರದಾಯಿಕ ಊಟೋಪಚಾರಗಳನ್ನು ಬಿಟ್ಟಿಲ್ಲ. ಆಧುನಿಕತೆಗನುಸಾರವಾಗಿ ಆಹಾರವನ್ನು ಉಪಯೋಗಿಸುತ್ತಾರೆ.

೩. ಬೈಲುಕುಪ್ಪೆ ಟಿಬೆಟಿಯನ್ನರ ಉಡುಗೆ-ತೊಡುಗೆ:

ಟಿಬೆಟಿಯನ್ನರ ಧರ್ಮಗುರುಗಳು ಮತ್ತು ಲಾಮಗಳು ತಮ್ಮ ಉಡುಗೆ-ತೊಡುಗೆಗಳಲ್ಲಿ ಸಾಂಪ್ರದಾಯಿಕ ಶೈಲಿಯನ್ನು ಉಳಿಸಿಕೊಂಡಿದ್ದಾರೆ. ದಲೈಲಾಮ ಧರ್ಮಗುರುಗಳು, ಈ ಧರ್ಮದ ವಿದ್ವಾಂಸರುಗಳು, ಸಾಂಪ್ರದಾಯಿಕವಾಗಿ ಹಳದಿ ಬಣ್ಣದ ಮತ್ತು ಕಂದುಗೆಂಪು ಬಣ್ಣದ ನಿಲುವಂಗಿಯನ್ನು ಧರಿಸುತ್ತಾರೆ. ಇವರುಗಳು ಧಯನ ಉಡುಪಿನಲ್ಲಿ ಡ್ರಾಗನ ಚಿತ್ರವನ್ನು ಕಸೂತಿ ಮಾಡಿರುತ್ತಾರೆ. ಈ ಉಡುಪುಗಳು ರೇಷ್ಮೆಯಿಂದ ಸಿದ್ದಪಡಿಸಿದ ಬಟ್ಟೆಗಳಾಗಿವೆ. ಅಂದರೆ ಹೆಚ್ಚು ಬೆಲೆಬಾಳುವ ವಸ್ತುಗಳನ್ನು ಇವರು ಧರಿಸುತ್ತಾರೆ. ಇವರ ಶಿಷ್ಯರಾದ ಸಾಮಾನ್ಯ ಲಾಮಾಗಳು ಸಹ ಕಡುಗೆಂಪು ಬಣ್ಣದ ನಿಲುವಂಗಿಗಳನ್ನು ಧರಿಸುತ್ತಾರೆ. ಇವರು ತಮಗೆ ಕೈಗೆಟುಕುವ ಬೆಲೆಯ ಬಟ್ಟೆಯನ್ನು ಕೊಂಡುಕೊಳ್ಳುತ್ತಾರೆ. ಇವರುಗಳು ಕೊರಳಿಗೆ ಕೈಗಳಿಗೆ ಮಣಿಗಳನ್ನು ದಾರದಲ್ಲಿ ಪೋಣಿಸಿಕೊಂಡು ಹಾಕಿಕೊಳ್ಳುತ್ತಾರೆ.[೧]

ಬೈಲುಕುಪ್ಪೆ ನಿರಾಶ್ರಿತ ತಾಣಗಳಿಗಿಂತ ಬೌದ್ಧವಿಹಾರಗಳಲ್ಲಿ ಸಾವಿರಾರು ಲಾಮಗಳು ತಮ್ಮ ಧರ್ಮಕ್ಕನುಗುಣವಾಗಿ ಪೂಜೆ ಪ್ರಾರ್ಥನೆಯಲ್ಲಿ ಪ್ರತಿನಿತ್ಯ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇಂತಹ ಸಂದರ್ಭದಲ್ಲಿ ಇವರ ಸಮೂಹವನ್ನು ನೋಡಿದಾಗ ಕಡುಗೆಂಪು ಬಣ್ಣದ ನಿಲುವಂಗಿಯನ್ನು ಮತ್ತು ಅದರ ಮೇಲೆ ಕಂದುಬಣ್ಣದ ಶಾಲುಗಳನ್ನು ಹೊದ್ದುಕೊಂಡಿರುತ್ತಾರೆ. ಮತ್ತು ಇವರೆಲ್ಲರೂ ತಲೆಯ ಕೂದಲೆಲ್ಲವನ್ನು ತೆಗೆಸಿರುತ್ತಾರೆ. ಇವರ ಸಮೂಹವನ್ನು ನೋಡಿದಾಗ ಕೆಂಪು ದೃಶ್ಯವೇ ಕಣ್ಣಿಯವಾಗುತ್ತಾರೆ. ಬೈಲುಕುಪ್ಪೆಯ ಲಾಮಕ್ಯಾಂಪಿನಲ್ಲಿ ಬಂದು ಬೌದ್ಧ ದಣನದ ವಿಶ್ವವಿದ್ಯಾನಿಲಯವೇ ಇದೆ. ಅಲ್ಲಿ ನೋಡಿದರಂತೂ ಸಾಮಾನ್ಯ ಜನರು ಇರುವುದೇ ಅಪರೂಪ ಲಾಮಗಳು ಹಿಂಡು ಹಿಂಡೇ ಗುಂಪು ಗುಂಪಾಗಿರುವುದು ಗೋಚರವಾಗುತ್ತದೆ. ಇಲ್ಲಿಗೆ ಭೇಟಿ ನೀಡುವ ಪ್ರವಾಸಿಗರಿಗೆ ಆಶ್ಚರ್ಯವಾಗುತ್ತದೆ. ಏಕೆಂದರೆ ನಾವು ಭಾರತದಲ್ಲಿದ್ದೇವೋ ಅಥವಾ ಟಿಬೆಟ್‌ನಲ್ಲಿದ್ದೇವೊ ಎನ್ನುವ ರೀತಿಯಲ್ಲಿ ಈ ಸ್ಥಳ ಕಂಗೊಳಿಸುತ್ತದೆ. ಲಾಮಗಳೆಲ್ಲರು ಕಡುಗೆಂಪು ಬಣ್ಣದ ನಿಲುವಂಗಿಗಳು ಕವಚದಂತಹ ಅಗಿಶಾಲುಗಳನ್ನು ಸಮವಸ್ತ್ರದ ರೀತಿಯಲ್ಲಿ

೧. ಬೈಲುಕುಪ್ಪೆ ಟಿಬೆಟಿಯನ್ನರು ಒಂದು ಸಾಂಸ್ಕೃತಿಕ ಅಧ್ಯಯನ : ಎನ್.ಆರ್.ಚಂದ್ರೇಗೌಡ, ಪುಟ. ೯೦.

ಧರಿಸಿಕೊಂಡಿರುವುದನ್ನು ನೋಡಿದರೆ ಇದು ಒಂದು 'ಪುಟ್ಟ ಟಿಬೆಟ್' ಎನ್ನುವ ರೀತಿಯಲ್ಲಿ ಗೋಚರವಾಗುತ್ತದೆ.

ಲಾಮಗಳು ಧರಿಸಿರುವ ಸಮವಸ್ತ್ರಗಳಲ್ಲಿ ಕಸೂತಿ ಮಾಡಿದ ಕೆಲವು ಸಂಪ್ರದಾಯಿಕ ಪ್ರಾಣಿಪಕ್ಷಿಗಳು, ಚಿತ್ರಗಳು ಇರುತ್ತವೆ. ಈ ಸಮವಸ್ತ್ರದಲ್ಲಿ ಗುಂಡಿಗಳಿದ್ದು ಇವುಗಳಿಗೆ ಚಿನ್ನದ ಬಣ್ಣದಲ್ಲಿ ಲೇಪನವನ್ನು ಮಾಡಿರುತ್ತಾರೆ. ಧರಿಸುವ ವಸ್ತ್ರದಲ್ಲಿ ಒಳಭಾಗದಲ್ಲಿ ಜೇಬುಗಳು ಸಹ ಇರುತ್ತವೆ. ಪಾದಗಳಿಗೆ ಬಟ್ಟೆಯಿಂದ ತಯಾರಿಸಿದ ಬೂಟುಗಳನ್ನು ಹಾಕುತ್ತಾರೆ. ಸಮವಸ್ತ್ರಗಳಿಗೆ ರೇಷ್ಮೆಯ ದಾರದಿಂದ ಕಸೂತಿ ಮಾಡಿರುತ್ತಾರೆ. ಪ್ಯಾಂಟನ್ನು ಪಾದದ ಹತ್ತಿರ ಸಂಪೂರ್ಣವಾಗಿ ಅಂಟಿ ರೀತಿಯಲ್ಲಿರುತ್ತದೆ. ಹಾಗೆ ಲಾಮಗಳು ಅವರವರ ಸ್ಥಾನಮಾನಕ್ಕನುಗುಣವಾಗಿ ತಮ್ಮ ಧರ್ಮಕ್ಕನುಗುಣವಾಗಿ ಉಡುಗೆ-ತೊಡುಗೆಗಳನ್ನು ಧರಿಸುತ್ತಾರೆ. ತಮ್ಮ ದಿನನಿತ್ಯದ ಪೂಜೆ, ಪ್ರಾರ್ಥನೆಯಲ್ಲಿ ನಿರಂತರವಾಗಿ ತೊಡಗಿಸಿಕೊಂಡಿರುತ್ತಾರೆ.

ಲಾಮಾಗಳನ್ನು ಬಿಟ್ಟು ಉಳಿದ ಟಿಬೆಟಿಯನ್ನರ ಉಡುಗೆತೊಡುಗೆಯಲ್ಲಿ ಬಹಳಷ್ಟು ವ್ಯತ್ಯಾಸಗಳು ವಿಭಿನ್ನವಾಗಿ ಕಂಡುಬರುತ್ತವೆ. ಗಂಡಸರು ಶರ್ಟು ಮತ್ತು ಪ್ಯಾಂಟನ್ನು ಧರಿಸುತ್ತಾರೆ. ಯಾವುದೇ ಸಂದರ್ಭದಲ್ಲಿ ದೋತಿಯನ್ನು ಉಡುವುದಿಲ್ಲ. ಹಾಗೆಯೇ ಹೆಂಗಸರು ಸೀರೆ ಮತ್ತು ಕುಪ್ಪಸವನ್ನು ಧರಿಸದೇ ಬಣ್ಣಬಣ್ಣದ ವಿನ್ಯಾಸಗಳಿಂದ ಕೂಡಿದ ನಿಲುವಂಗಿಯನ್ನು ಮತ್ತು ಉದ್ದವಾದ ತೋಳಿನ ಶರ್ಟ್ ರೀತಿಯಲ್ಲಿರುವ ತುಪ್ಪಟವನ್ನು ಧರಿಸುತ್ತಾರೆ. ಶ್ರೀಮಂತ ವರ್ಗದವರು ಹೆಚ್ಚು ಬೆಲೆಬಾಳುವ ಉಡುಗೆ-ತೊಡುಗೆಗಳನ್ನು ಧರಿಸಿದರೆ ಸಾಮಾನ್ಯ ವರ್ಗ ಹಾಗೂ ಬಡವರು ತಮಗೆ ಕೈಗೆಟುಕುವ ಬೆಲೆಯ ಉಡುಗೆ-ತೊಡುಗೆಗಳನ್ನು ಧರಿಸುತ್ತಾರೆ.[೧]

ಟಿಬೆಟಿಯನ್ನರಲ್ಲೂ ಕೇಶಾಲಂಕಾರವು ವಿಭಿನ್ನವಾಗಿದೆ. ಹೆಂಗಸರು ರೇಷ್ಮೆಯ ಒಂದು ಪೀಪ ಬಳಸಿ ಜಡೆಯ ರೂಪದಲ್ಲಿ ಕಟ್ಟುತ್ತಾರೆ. ಕಿವಿಗಳಿಗೆ ಚಿನ್ನದ ಮುತ್ತಿನ ಆಧುನಿಕ ಮಾದರಿಯ ಆಭರಣಗಳನ್ನು ಧರಿಸುತ್ತಾರೆ. ಕೊರಳಿಗೆ ವಿಭಿನ್ನವಾದ ಶೈಲಿಯ ಸರವನ್ನು ಧರಿಸುತ್ತಾರೆ. ಆ ಸರವು ಸಣ್ಣ ಸಣ್ಣ ಪೆಟ್ಟಿಗೆಯ ಆಕಾರದಲ್ಲಿದ್ದು ಅದನ್ನು ವಜ್ರ, ಮುತ್ತು ಮತ್ತು ಚಿನ್ನದ ಹವಳಗಳಿಂದ ವಿಭಿನ್ನ ಆಕೃತಿಯನ್ನು ಒಳಗೊಂಡು ತಯಾರಿಸಲ್ಪಟ್ಟಿರುತ್ತಾರೆ. ಈ ರೀತಿಯ ಸರವನ್ನು ಧರಿಸುವುದರಿಂದ

೧. ಬೈಲುಕುಪ್ಪೆ ಟಿಬೆಟಿಯನ್ನರು ಒಂದು ಸಾಂಸ್ಕೃತಿಕ ಅಧ್ಯಯನ : ಎನ್.ಆರ್.ಚಂದ್ರೇಗೌಡ, ಪುಟ. ೯೧.

ಅವರನ್ನು ದೃಷ್ಟಿದೋಷ ಮತ್ತು ತೊಂದರೆಗಳಿಂದ ರಕ್ಷಿಸುತ್ತದೆ ಎಂಬ ನಂಬಿಕೆಯಿದೆ. ಮುತ್ತು ರತ್ನಗಳಿಂದ ಮಾಡಿದ ಸೊಂಟಕ್ಕೆ ತೊಡುವ ಡಾಬನ್ನು ಧರಿಸುತ್ತಾರೆ. ತಮ್ಮ ಕೈಬೆರಳುಗಳಿಗೆ ಉಂಗುರವನ್ನು ಧರಿಸುತ್ತಾರೆ. ಇವರು ತಮ್ಮ ಕೇಶವನ್ನು ಜಡೆ ಹಾಕುವುದರ ಮೂಲಕ ವಿಭಿನ್ನವಾಗಿ ಅಲಂಕರಿಸಿಕೊಳ್ಳುತ್ತಾರೆ. ಇದರಲ್ಲಿ ಕೆಲವು ರೇಷ್ಮೆಯಿಂದ ಮಾಡಿದ ರಿಬ್ಬನ್ ಬ್ಯಾಂಡನ್ನು ಬಳಸಿ ಉದ್ದನೆಯ ಜಡೆ ಹಾಗೂ ಎರಡು ರೀತಿಯ ಮೋಟು ಜಡೆಯನ್ನು ಹಾಕು ಅಲಂಕರಿಸಿಕೊಳ್ಳುತ್ತಾರೆ. ಇದಲ್ಲದೆ ಅವರದೇ ಆದ ವಿಭಿನ್ನ ರೀತಿಯಲ್ಲಿ ಕೂದಲನ್ನು ಗಂಟುಹಾಕಿ ಕಸೂತಿ ಮಾಡಿದ ಕೆಂಪು ಶಿರ ವಸ್ತ್ರವನ್ನು ಧರಿಸುತ್ತಾರೆ.

ಪ್ರಸ್ತುತ ಯುವಕ ಮತ್ತು ಯುವತಿಯರು ತಮ್ಮ ಧರ್ಮಕ್ಕನುಗುಣವಾಗಿ ಬದುಕುವುದರ ಜೊತೆಗೆ ಉಡುಗೆ-ತೊಡುಗೆಯಲ್ಲಿ ಆಧುನಿಕತೆಯನ್ನು ಸಂಪೂರ್ಣವಾಗಿ ಅಳವಡಿಸಿಕೊಂಡಿದ್ದಾರೆ. ತಮ್ಮ ಕೇಶಾಲಂಕಾರವನ್ನು ವಿಭಿನ್ನವಾಗಿ ಅಲಂಕರಿಸಿ-ಕೊಂಡಿರುತ್ತಾರೆ. ಕೆಲವರು ಕೂದಲನ್ನು ತುಂಡಾಗಿಯೂ ಮತ್ತು ಕೆಲವರು ಉದ್ದವಾಗಿಯೂ ಬಿಟ್ಟು ಕತ್ತರಿಸಿಕೊಂಡಿರುತ್ತಾರೆ. ಸಾಮಾನ್ಯವಾಗಿ ಗಂಡು ಮತ್ತು ಹೆಣ್ಣು ಮಕ್ಕಳು ಪ್ರಸ್ತುತದಲ್ಲಿ ಒಂದೇ ರೀತಿಯಲ್ಲಿ ಕೇಶಾಲಂಕಾರವನ್ನು ಮಾಡಿಕೊಂಡಿರುತ್ತಾರೆ. ಇವರುಗಳು ಆಧುನಿಕ ಮಾದರಿಯ ಅದರಲ್ಲೂ ಪಾಶ್ಚಾತ್ಯ ದೇಶಗಳ ಶೈಲಿಯ ಉಡುಗೆ-ತೊಡುಗೆಗಳನ್ನು ಬಹುಬೇಗ ಅನುಕರಿಸುತ್ತಾರೆ, ಜೀನ್ಸ್ ಪ್ಯಾಂಟ್‌ಗಳು, ಶರ್ಟ್‌ಗಳು, ಟೀಶರ್ಟ್‌ಗಳು, ಬೆಲ್ಟ್‌ಗಳು, ಷೂಗಳು (ಪಾದರಕ್ಷೆಗಳು) ಪ್ರತಿನಿತ್ಯ ಧರಿಸುತ್ತಾರೆ. ವಿಭಿನ್ನ ವಿನ್ಯಾಸಗಳಿಂದ ಕೂಡಿರುವ ಚಿನ್ನದ ಆಭರಣಗಳನ್ನು ಬೆರಳಿಗೆ, ಕೊರಳಿಗೆ, ಕೈಗಳಿಗೆ ಧರಿಸುತ್ತಾರೆ. ತಮ್ಮ ಹಲ್ಲುಗಳಿಗೆ ಚಿನ್ನದ ತಗಡಿನ ಹೊದಿಕೆಯನ್ನು ಹಾಕಿಸಿಕೊಂಡಿರುತ್ತಾರೆ. ಇದು ನೋಡುವುದಕ್ಕೆ ಆಕರ್ಷಣೀಯವಾಗಿರುತ್ತದೆ. ಇದನ್ನು ಹಾಕಿಕೊಂಡರೆ ಒಳ್ಳೆಯದಾಗುತ್ತದೆ ಎಂದು ನಂಬುತ್ತಾರೆ.

ಟಿಬೆಟಿಯನ್ನರೆಲ್ಲರೂ ಬೇಸಿಗೆಕಾಲ, ಚಳಿಗಾಲ ಮತ್ತು ಮಳೆಗಾಲಕ್ಕೆ ಯೋಗ್ಯ-ವಾದ ಬಟ್ಟೆಗಳನ್ನು ಧರಿಸುತ್ತಾರೆ. ಚಳಿಗಾಲ ಮಳೆಗಾಲದಲ್ಲಿ ಉಣ್ಣೆಯ ಬಟ್ಟೆಗಳನ್ನು ಧರಿಸುತ್ತಾರೆ. ಉಣ್ಣೆಯ ಸ್ವೆಟರ್ ಮತ್ತು ಟೋಪಿಗಳನ್ನು ಉಪಯೋಗಿಸುತ್ತಾರೆ.

ವೆಲ್‌ವೆಟ್‌ನಿಂದ ತಯಾರಿಸಿ ದಂತಹವುಗಳನ್ನು ಧರಿಸುತ್ತಾರೆ. ಬೇಸಿಗೆ ಕಾಲದಲ್ಲಿ ಬಹುಪಾಲು ಆಧುನಿಕ ಮಾದರಿಯ ವಸ್ತುಗಳನ್ನು ಧರಿಸುತ್ತಾರೆ.[೧]

ಹೆಂಗಸರ ಉಡುಗೆ–ತೊಡುಗೆಯಲ್ಲಿ ಭಿನ್ನತೆಯೇನು ಕಂಡುಬರುವುದಿಲ್ಲ. ಗಂಡಸರಂತೆಯೇ ರೇಷ್ಮೆ, ಹತ್ತಿ, ಉಣ್ಣೆಯಿಂದ ನೇಯ್ದ ಉದ್ದನೆಯ ತೋಳುಳ್ಳ ಅಂಗಿಯನ್ನು ಮತ್ತು ಸೊಂಟದ ಕೆಳಗೆ ಉದ್ದನೆಯ ಲಂಗವನ್ನು ತೊಡುತ್ತಾರೆ. ಹಾಗೆಯೇ ತೋಳಿಲ್ಲದ ಕುಪ್ಪಸವನ್ನು ಅದರ ಮೇಲೆ ತೋಳಿರುವ ಅಂಗಿಯನ್ನು ಧರಿಸುತ್ತಾರೆ. ಇವರೆಲ್ಲರೂ ಸಣ್ಣ ಸಣ್ಣ ಮಣಿಗಳನ್ನು ಕೈಗಳಿಗೆ ಮತ್ತು ಕೊರಳಿಗೆ ಧರಿಸುತ್ತಾರೆ. ಒಳ್ಳೆಯ ಚರ್ಮದಿಂದ ಮಾಡಿದ ಕೈಚೀಲವನ್ನು ಉಪಯೋಗಿಸುತ್ತಾರೆ. ಅದರಲ್ಲೂ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಪ್ರಯಾಣಿಸುವ ಸಂದರ್ಭದಲ್ಲಿ ಬೇಕಾಗಿರುವ ದೊಡ್ಡ ಬ್ಯಾಗುಗಳನ್ನು ಬಳಸುತ್ತಾರೆ. ಈ ಪ್ರದೇಶದಲ್ಲಿ ಟಿಬೆಟ್‌ಯನ್ನರನ್ನು ನೋಡಿದಾಗ ಸ್ಥಳೀಯರ ಉಡುಗೆ–ತೊಡುಗೆಗಳಿಂದ ಭಿನ್ನವಾದ ರೀತಿಯಲ್ಲಿ ವ್ಯತ್ಯಾಸಗಳು ಕಂಡುಬರುತ್ತವೆ. ಇಷ್ಟಾದರೂ ಆಧುನಿಕತೆಗೆ ಅನುಸಾರವಾಗಿ ಬಹುಬೇಗ ಹೊಂದಿಕೊಂಡು ಸ್ಥಳೀಯರಿಗಿಂತ ಭಿನ್ನವಾಗಿ ಬದುಕುವ ಮಾರ್ಗೋಪಾಯಗಳನ್ನು ಕಂಡುಕೊಂಡಿದ್ದಾರೆ.

**೪) ಧಾರ್ಮಿಕ ವಿಚಾರಗಳು (ಬಾನ್ ಸಂಪ್ರದಾಯ):**

**ಅ) ಲಾಮಾಗಳು:** ಕ್ರೈಸ್ತರ (ಕ್ರಿಶ್ಚಿಯನ್) ಧರ್ಮಗುರು ಪೋಪರ ಅನುಯಾಯಿಗಳಾದ ಫಾದರ್‌ಗಳಂತೆ ಹಿಂದೂಧರ್ಮದಲ್ಲಿರುವ ಸ್ವಾಮೀಜಿ ಇಲ್ಲವೇ ಸನ್ಯಾಸಿಗಳಂತೆ, ಬೌದ್ಧಧರ್ಮದಲ್ಲಿಯೂ ಬಿಕ್ಕು ಅಥವಾ ಭಿಕ್ಷುಣಿ ಪದ್ಧತಿಯನ್ನು ಕಾಣುತ್ತೇವೆ.[೨] ಈ ಬೌದ್ಧ ಬಿಕ್ಷುಗಳನ್ನು ಟಿಬೆಟ್ ಮತ್ತು ಮಂಗೋಲಿಯಾದವರು ಕ್ರಮವಾಗಿ ದಲೈಲಾಮ ಮತ್ತು ತೇಷಲಾಮ ಎನ್ನುತ್ತಾರೆ. ಟಿಬೆಟಿಯನ್ನರಿರುವ ಕಡೆ ಬೋಳುತಲೆಯ ಕಡುಕೆಂಪುಬಣ್ಣದ ನಿಲುವಂಗಿಗಳನ್ನು ತೊಟ್ಟು ಕೆಂಪು ಕೆಂಪಾಗಿ ಕಾಣುವ ಲಾಮಾಗಳ ಹಿಂಡನ್ನು ಕಾಣುತ್ತೇವೆ. ಇವರಿಗೆ ಬೌದ್ಧ ವಿಹಾರಗಳಲ್ಲಿ ಉಚಿತ ಊಟ, ವಸತಿಗಳಿರುತ್ತವೆ. ಒಮ್ಮೆ ಲಾಮನಾಗಿ ದೀಕ್ಷೆ ತೆಗೆದುಕೊಂಡರೆ ಜೀವನ ಪರ್ಯಂತ ಲಾಮಾನಾಗಿಯೇ

---

೧. ಬೈಲುಕುಪ್ಪೆ ಟಿಬೆಟಿಯನ್ನರು ಒಂದು ಸಾಂಸ್ಕೃತಿಕ ಅಧ್ಯಯನ : ಎನ್.ಆರ್.ಚಂದ್ರೇಗೌಡ, ಪುಟ. ೯೨.

೨. ಅದೇ., ಪುಟ. ೧೦೧.

ಮುಂದುವರಿಯಬೇಕೆಂಬ ನಿಯಮವಿಲ್ಲ. ಬೇಕೆಂದಾಗ ಗೃಹಸ್ಥನಾಗಬಹುದು. ಈ ಬೌದ್ಧ ಬಿಕ್ಷುಗಳಲ್ಲಿಯೇ ನಾಲ್ಕು ಪಂಗಡಗಳಿವೆ.

೧) ಗೆಲುಕ್ಪಾ

೨) ನಿಂಗ್ಮಾ

೩) ಕಗಿದ್

೪) ಸಕ್ಯ

ಈ ಪಂಗಡಗಳಲ್ಲಿ ಗೆಲುಕ್ಪಾ ಪಂಗಡವು ಪ್ರಬಲವಾದುದಾಗಿದೆ. ದಲೈಲಾಮಾ ಮತ್ತು ಪಂಚೆನ್ ಲಾಮಾರು ಈ ಪಂಗಡಗಳನ್ನು ಪ್ರತಿನಿಧಿಸುತ್ತಾರೆ. ಬೌದ್ಧರು ಪುನರ್ಜನ್ಮದಲ್ಲಿ ನಂಬಿಕೆಯಿಟ್ಟಿರುವ ಕಾರಣ ದಲೈಲಾಮ ಹಾಗೂ ಪಂಚೆನ್‌ಲಾಮಾರು ಪುನಃ ಅವತರಿಸುತ್ತಾರೆ. ಟಿಬೆಟಿಯನ್ನರ ಅಧಿನಾಯಕ ದಲೈಲಾಮ ಇವರು ಸತ್ತಂತಹ ಸಂದರ್ಭದಲ್ಲಿ ಪುನಃ ಅವತರಿಸಿ ಒಂದು ಸಾಮಾನ್ಯ ಕುಟುಂಬದಲ್ಲಿ ಜನಿಸುತ್ತಾರೆ. ಟಿಬೆಟಿಯನ್ನರಲ್ಲಿ ದಲೈಲಾಮಾರನ್ನು ಹುಡುಕುವ ಪರಿಪಾಠವಿರುವುದರಿಂದ ಸಮಸ್ತ ಜನತೆಯೆಲ್ಲರು ಒಂದು ಸಭೆಯಲ್ಲಿ ಭಾಗವಹಿಸುತ್ತಾರೆ. ದಲೈಲಾಮ ಪುನರಾವತರಿಸಿದ್ದಾರೆ ಎಂದು ತಿಳಿಸಿದರೆ ಸತ್ತ ಲಾಮ ಧರಿಸಿದ್ದ ಬಟ್ಟೆಗಳು, ಅವರು ಓದುತ್ತಿದ್ದ ಗ್ರಂಥಗಳು ಇವೇ ಮುಂತಾದವನ್ನು ಒಂದು ಮೇಜಿನ ಮೇಲೆ ಇಡುತ್ತಾರೆ. ಇಂತಹ ೧೬ ಜೊತೆ ಬಟ್ಟೆಗಳನ್ನು ಇಲ್ಲಿ ಇಡಲಾಗುತ್ತದೆಯಂತೆ. ಪುನರವತರಿಸಿದ ಆ ಹುಡುಗ ಅಥವಾ ಲಾಮಾ ಅಲ್ಲಿಟ್ಟಿದ್ದ ಬಟ್ಟೆಗಳಲ್ಲಿಗೆ ಬಂದು ಇವೇ ನನ್ನ ಬಟ್ಟೆಗಳು ಪುಸ್ತಕಗಳು ಎಂದು ಗುರುತಿಸಿದಾಗ ಅವನನ್ನು ದಲೈಲಾಮ ಎಂದು ಗುರುತಿಸುತ್ತಾರೆ. ತಮ್ಮ ಧಾರ್ಮಿಕ ನಾಯಕನೆಂದು ಮಾನ್ಯ ಮಾಡುತ್ತಾರೆ. ಈಗಿರುವ ದಲೈಲಾಮರು ೧೪ನೆಯವರಾಗಿದ್ದಾರೆ. ದಲೈಲಾಮರು ರಾಜಕೀಯವಾಗಿ ಪ್ರಬಲವಾಗಿದ್ದರೆ ಪಂಚೆನ್ ಲಾಮ ಸೈದ್ಧಾಂತಿಕವಾಗಿ ಪ್ರಬಲರಾಗಿದ್ದಾರೆ. ತಮ್ಮಲ್ಲಿಯೇ ಇರುವ ವಿವಿಧ ಪಂಗಡಗಳ ಅಸ್ತಿತ್ವದಿಂದಾಗಿ ಆ ಪಂಗಡಗಳಲ್ಲಿಯೇ ದ್ವೇಷ, ಅಸೂಯೆಯು ಹೊಗೆಯಾಡುತ್ತಿದೆ. ಕೆಲವು ಪಂಗಡದವರು ದಲೈಲಾಮರ ಪರವಾಗಿದ್ದರೆ, ಕೆಲವರು ಪಂಚೆನ್ ಲಾಮರ ಪರವಾಗಿರುತ್ತಾರೆ. ಕೆಲವರು ಟಿಬೆಟ್ ಪರವಾಗಿದ್ದರೆ, ಕೆಲವರು ಚೀನಾ ಪರವಾಗಿದ್ದಾರೆ. ಒಮ್ಮೊಮ್ಮೆ ಇದು ಅತಿರೇಕಕ್ಕೆ ಹೋದಾಗ ಪರಿಸ್ಥಿತಿ ಉಲ್ಬಣಗೊಂಡು ಗಲಭೆಯಾಗಿ ಕೊಲೆಗಳಾಗುವ ಸಂಭವವಿರುತ್ತದೆ. ಇದಕ್ಕೆ ಇತ್ತೀಚೆಗೆ ನಡೆದ ಒಂದು ಗಲಭೆಯೇ

ಕಾರಣ ಎನ್ನಬಹುದು. ಟಿಬೆಟಿಯನ್ನರು ನಿರಾಶ್ರಿತ ರಾಗಿರುವುದರಿಂದ ಅವರಿಗೆ ಹೊರದೇಶಗಳಿಂದ ಡಾಲರ್‌ಗಟ್ಟಲೆ ಹಣ ಸಹಾಯಧನವಾಗಿ ಬರುತ್ತದೆ. ಇದನ್ನು ಹಂಚಿಕೊಳ್ಳುವ ವಿಚಾರದಲ್ಲಿ ವಿವಿಧ ಪಂಗಡಗಳ ನಡುವೆ ಭಿನ್ನಾಭಿಪ್ರಾಯವುಂಟಾಗಿ ಕೊಲೆಯಾದವು ಎಂಬ ವದಂತಿಗಳಿವೆ. ಆದರೆ ಈ ವಿಚಾರದ ಬಗ್ಗೆ ಟಿಬೆಟಿಯನ್ನರನ್ನು ಕೇಳಿದರೆ ಯಾವ ಮಾಹಿತಿಯನ್ನು ನೀಡುವುದಿಲ್ಲ. ಸ್ಥಳೀಯ ಜನರಿಂದಲೇ ಅಲ್ಪಸ್ವಲ್ಪ ಮಾಹಿತಿಯನ್ನು ಪಡೆದುಕೊಳ್ಳಬಹುದು.[೧]

**ದಲೈಲಾಮಾ ಮತ್ತು ಪಂಚೇನ್ ಲಾಮಾರ ಉಗಮ ಸ್ಥಿತಿ:**

ಚೀನಾದ ಶ್ವೇತಪತ್ರದ ಲಿಖಿತದಂತೆ ೧೬೫೩ ಮತ್ತು ೧೭೧೩ರಲ್ಲಿ ರಾಜ್ಯಾಡಳಿತಗಾರರು ಐದನೇ ದಲೈಲಾಮಾ ಮತ್ತು ಪಂಚೇನ್ ಲಾಮಾರಿಗೆ ಗೌರವಾನ್ವಿತ ಬಿರುದುಗಳನ್ನು ನೀಡಿದರು. ಇದಕ್ಕನುಸಾರವಾಗಿ ದಲೈಲಾಮಾ ಮತ್ತು ಬೇಂಕ್ವೇನ್ ಇರ್ಡಿನಿ (ಪಂಚನ್) ಸ್ಥಾನಗಳನ್ನು ಮತ್ತು ಟಿಬೆಟ್ಟಿನಲ್ಲಿ ಇವರ ಧಾರ್ಮಿಕ ಮತ್ತು ರಾಜಕೀಯ ಛಾಯೆಯನ್ನು ಗುರುತಿಸಲಾಗಿದೆ. ದಲೈಲಾಮಾ ಲಾಸಾರವರೆಗೆ ಟಿಬೆಟ್ಟಿನ ಉಳಿದ ಭಾಗಗಳಲ್ಲಿ ಬೇಂಕ್ವೇನ್ ಇರ್ಡಿನಿ ಶಿಗತ್ಸಾದಿಂದ ರಾಜ್ಯಭಾರ ಮಾಡುತ್ತಿದ್ದನು ಎಂಬುದಕ್ಕೆ ಯಾವುದೇ ಸಾಕ್ಷ್ಯಾಧಾರಗಳಿಲ್ಲ ಎಂದು ತಿಳಿದುಬಂದಿದೆ.

ಟಿಬೆಟ್ಟಿನ ಧಾರ್ಮಿಕ ವಿದ್ವಾಂಸ ಮತತಲುಸಂತತ್ಸೋಗ್ (೧೩೫೭–೧೪೧೯) ಟಿಬೆಟಿನಲ್ಲಿ ಬೌದ್ಧಧರ್ಮವನ್ನು ಅನುಸರಿಸುತ್ತಿದ್ದರು. ಈಗ ಗೆಲುಪಾ ಸಂಪ್ರದಾಯವನ್ನು ಆಧಾರವಾಗಿಟ್ಟು ಕೊಂಡಿದ್ದಾರೆ. ನಂಗ್ಮಾ, ಸಾಖ್ಯಾ ಮತ್ತು ಕಾಗ್ಯೂ ಎಂಬ ಮೂರು ಧಾರ್ಮಿಕ ಗುಂಪುಗಳಿದ್ದು ಅವುಗಳಿಗಿಂತ ಬಹುದೊಡ್ಡದಾದ ನಾಲ್ಕನೆಯ ಧರ್ಮವಾಗಿ ಬೌದ್ಧಧರ್ಮವು ಟಿಬೆಟಿನಲ್ಲಿ ಕಾಣಿಸಿಕೊಂಡಿತು.

ತೇಸಂಖಾಸರನ ಮುಖ್ಯ ಶಿಷ್ಯನಾಗಿ "ಪಂಚ್‌ನ್‌ಗೇಂದುನ್" ದೃಪನಾಗಿದ್ದನು. ಸೋನಂ ಗ್ಯಾತ್ಸೋ–ಪಂಚೆನ್ ಗೇಂದುನ ದೃಪನ ಮೂರನೆ ಅವತಾರವೆಂತಲೂ ಇವರನ್ನು ಅಲ್ತಾನ ವಂಶದ ಮಂಗೋಲ್ ದರ್‌ಬಾರಿನಲ್ಲಿ ಆಹ್ವಾನವಿತ್ತರು. ಅವರಿಗೆ ಮೊಟ್ಟಮೊದಲು 'ತಲಾಯ್' (ದಲಾಯ್) ಲಾಮಾ ಎನ್ನುವ ಬಿರುದನ್ನು ಕೊಟ್ಟರು. ಇದೇ ಬಿರುದಿನಿಂದ ಇವರ ಮೊದಲೆರಡು ಅವತಾರಗಳನ್ನು ಗೌರವಿಸಲಾಯಿತು.

---

೧. ಬೈಲುಕುಪ್ಪೆ ಟಿಬೆಟಿಯನ್ನರು ಒಂದು ಸಾಂಸ್ಕೃತಿಕ ಅಧ್ಯಯನ : ಎನ್.ಆರ್.ಚಂದ್ರೇಗೌಡ, ಪುಟ. ೧೦೨.

ನಂತರ ಇವರು ಮೂರನೆ ದಲಾಯ್ ಲಾಮಾ ಆದರು. ಈ ರೀತಿ ದಲಾಯ್ ಲಾಮಾರ ಪರಂಪರೆ ಮುಂದುವರೆಯಿತು. ಚೀನಿ ಪ್ರಚಾರ ತಂತ್ರದಂತೆ ಒಂದು ಶತಾಬ್ದಿಗೆ ಮೊದಲೇ ಮಂಚೂ ಶಾಸಕರಿಂದ ದಲಾಯ್‌ಲಾಮಾ ಬಿರುದು ಮೊಟ್ಟಮೊದಲಿಗೆ ಸ್ಥಾಪನೆಯಾಯಿತು ಎಂಬುದು ಸರಿಯಲ್ಲ. ಇನೇ ದಲೈಲಾಮಾ ಮತ್ತು ಅಲ್ತಾನ್‌ಖಾನ್‌ರವರ ಪರಸ್ಪರ ಸಂಬಂಧ ಆಧ್ಯಾತ್ಮಿಕವಾಗಿತ್ತು. ಎರಡು ಶತಾಬ್ಧಿಗಳ ನಂತರ ರಾಜಕೀಯವಾಗಿ ಮಾರ್ಪಟ್ಟಿತು.[೧]

೧೬೪೨ರಲ್ಲಿ ಮಂಗೋಲರ ರಾಜಕುಮಾರಿ ಗುಶ್‌ರಿಖಾದ್ ಐದನೇ ದಲೈಲಾಮಾರಿಗೆ (ನ್ವಾಂಗ್ ಲೋಬ್ಸಂಗ್ ಗ್ಯಾತ್ಸೋ ೧೬೧೭ ೧ ೧೬೮೨) ಟಿಬೆಟ್‌ನ ರಾಜಕೀಯದಲ್ಲಿ ಅತ್ಯುನ್ನತ ಮತ್ತು ಧಾರ್ಮಿಕ ಪದವಿಯನ್ನು ಪಡೆಯಲು ಸಹಾಯ ಮಾಡಿದನು. ಐದನೇ ದಲೈಲಾಮಾ ಚೋದ್ಯೆ ಗ್ಯಾಲ್ಸೋನ (ಧರ್ಮರಾಜ) ಬಿರುದನ್ನು ಮಂಗೋಲ ರಕ್ಷಕನಿಗೆ ನೀಡಿ ಗೌರವಿಸಿದ ಕಾಲದಿಂದ ನಿರಂತರವಾಗಿ ದಲೈಲಾಮಾಗಳು ಟಿಬೆಟ್ಟಿನಲ್ಲಿ ಸ್ವಯಂಪ್ರಭುಗಳಂತೆ ರಾಷ್ಟ್ರಾಧ್ಯಕ್ಷರಾಗಿ ಆಡಳಿತ ನಡೆಸುತ್ತಿದ್ದಾರೆ. ತಾಶಿಹುಂಪೊ ಮಠದ ಸ್ಥಾಪನೆಯು ೧೪೪೭ರಲ್ಲಿ ಮೊಟ್ಟಮೊದಲು ದಲೈಲಾಮಾನಾದ ಪಂಚೆನ್‌ಗೇದುನ್ ದೃಪನಿಂದಾಯಿತು. ಇವನ ನಂತರ ತಶಿಲಹುಂಪೋ ಮಠಪೀಠಾಧೀಶರಿಗೆ ಪಾಂಡಿತ್ಯ ಧಾರೆಯೆರೆದು ಪಂಚೇನ್ ಪದವಿಯನ್ನು ನೀಡಲಾಯಿತು. ಅವತರಿಸಿದ ಐದನೇ ದಲೈಲಾಮಾ ತನ್ನ ಗುರುವಾದ ಪಂಚೆನ್ ಲೋಖ್ಸಾಂಗ್ ಚೋವೈಗ್ಯಾಲ್ಸೇನ್ ನಿಗೆತಾಶಿಲಹುರಪೋ ಇನ್ನು ಕೆಲವು ಮತದ ಸ್ವಾಮ್ಯತ್ವ ನೀಡಲಾಯಿತು. ಅವತರಿಸಿದ ಅನೇಕ ಲಾಮಾಗಳಲ್ಲಿ ಈ ಸ್ಥಿತಿ ಸಾಮಾನ್ಯವಾಗಿತ್ತು. ಸಾಕ್ಯಾಷಾಗ್ವಾಲಾ ದಾಕ್ಚದ್ ಲೋದೇನ್‌ಶೇಟ್ ಇವರುಗಳಿಗೆ ಟಿಬೆಟ್ ಸರ್ಕಾರದಿಂದ ಭೂಮಿಯನ್ನು ನೀಡಲಾಗಿತ್ತು. ಆದರೆ ರಾಜಕೀಯ ಮಹತ್ವದ್ದಾಗಿರಲಿಲ್ಲ. ಚೀನಿಯ ಸಾಮ್ಯವಾದ ಪ್ರಚಾರಕ್ಕೆ ವಿರುದ್ಧವಾಗಿ ಪಂಚನ್ ಲಾಮಾ ಮತ್ತು ಇನ್ನು ಉನ್ನತ ಲಾಮಾಗಳು ಧಾರ್ಮಿಕತೆಯ ಅಧಿಕಾರವನ್ನು ಅನುಭವಿಸುತ್ತಿದ್ದರು. ಆದರೆ ಟಿಬೆಟ್ಟಿನ ರಾಜಕೀಯದಲ್ಲಿ ಪಾಲ್ಗೊಂಡಿರಲಿಲ್ಲ. ಈ ರೀತಿ ಶಿಗಾತ್ಸೆ ಮತ್ತು ಸಾಶಿಲಗುಂಪೋ ಇವರ ರಾಜಕೀಯ ಅಸ್ತಿತ್ವ ಲಾಸಾದಿಂದ

೧. ಬೈಲುಕುಪ್ಪೆ ಟಿಬೆಟಿಯನ್ನರು ಒಂದು ಸಾಂಸ್ಕೃತಿಕ ಅಧ್ಯಯನ : ಎನ್.ಆರ್.ಚಂದ್ರೇಗೌಡ, ಪುಟ. ೧೦೩.

ನಿರ್ಮಿಸಲ್ಪಟ್ಟು ರಾಜ್ಯಪಾಲರುಗಳೊಂದಿಗೆ ಸೇರ್ಪಡೆಯಾಗಿತ್ತು. ದಲೈಲಾಮಾರ ರಾಜಕೀಯದಲ್ಲಿ ಮಂಚುಶಾಸಕರು ಸೇರಿರಲಿಲ್ಲ.

ಚೀನಾ ದೇಶವು ಟಿಬೆಟ್ಟಿನ ಮೇಲೆ ಆಕ್ರಮಣ ಮಾಡಿದ ನಂತರ ದಲೈಲಾಮಾ ತಲೆ ಮರೆಸಿಕೊಂಡು ಭಾರತದಲ್ಲಿ ನೆಲೆನಿಂತ ಮೇಲೆ ಅಲ್ಲಿಯೇ ಇದ್ದ ಪಂಚನ್ ಲಾಮಾರ ಸ್ಥಿತಿಗೆ ಆಗಾಗ (ನಿರಂತರವಾಗಿ) ತೊಂದರೆ ಕೊಡುತ್ತಿದ್ದರು. ಟಿಬೆಟ್ಟಿನ ರಾಜಕೀಯದ ಸೂತ್ರವನ್ನು ಪಂಚೆನ್ ಲಾಮಾರ ಕೈಯಲ್ಲಿ ಕೊಟ್ಟು ಅನೇಕ ಬಾರಿ ದಲೈಲಾಮಾರ ವಿರುದ್ಧ ದಂಗೆ ಏಳುವಂತೆ ಪ್ರೇರಣೆ ಮಾಡುತ್ತಿದ್ದರು. ದಲೈಲಾಮಾರ ಪದವಿಯನ್ನು ನೀವೇ ಪಡೆದುಕೊಳ್ಳಿರೆಂದು ಒತ್ತಾಯಿಸುತ್ತಿತ್ತು. ಆದರೆ ದೇಶಪ್ರೇಮಿ ಪಂಚೆನ್ ಲಾಮಾರು ಅದನ್ನು ತಿರಸ್ಕರಿಸಿದರು. ಇದರಿಂದಾಗಿ ಅನೇಕ ವರ್ಷಗಳವರೆಗೆ ಹಲವಾರು ಕಷ್ಟಗಳೊಂದಿಗೆ ಜೈಲುವಾಸವನ್ನು ಅನುಭವಿಸಲೇಬೇಕಾಯಿತು. ಇಷ್ಟಲ್ಲದೆ ಚೀನಿ ಸರ್ಕಾರವು ಇವರ ವಿರುದ್ಧ ಶ್ವೇತಪತ್ರದಲ್ಲಿ ಧಾವೆ ಹೂಡಿತು. ತಮ್ಮ ಧೂತಬೂಜೋಂಗ್‌ಶಿನ್‌ನ ಮೂಲಕ ೧೯೪೯ರಲ್ಲಿ ೧೪ನೇ ದಲೈಲಾಮಾನ ಪದವಿ ಸ್ಥಾಪನೆಯಲ್ಲಿ ಮುತುವರ್ಜಿ ವಹಿಸಿತೆಂದು ಕೋಮಿತಾಂಗ್ ಸರ್ಕಾರ ಹೇಳಿತು. ಶ್ವೇತಪತ್ರದ ಬರವಣಿಗೆಯು ಈ ರೀತಿ ಇದೆ. "೧೪ನೇ ದಲೈಲಾಮಾನ" ಪದವಿ ಸ್ಥಾಪನೆಗೋಸ್ಕರ ಚೀನಾದಲ್ಲಿ ರಾಷ್ಟ್ರೀಯ ಸರ್ಕಾರದ ಅವಶ್ಯಕತೆ ಇತ್ತು. ಯಾವುದೇ ಒಂದು ಶಕ್ತಿ ಟಿಬೆಟ್‌ನಲ್ಲಿ ಇರಲಿಲ್ಲವೆಂದು (೧೯೧೪-೧೯೪೯) ಪ್ರಮಾಣೀಕರಿಸುತ್ತದೆ.[೧]

ಧಾಮಿಕ ನಂಬಿಕೆ ಮತ್ತು ಪರಂಪರೆಗಳ ಆಧಾರದಲ್ಲಿ ಹಲವಾರು ವರ್ಷಗಳಿಂದ ದಲೈಲಾಮಾರ ಚುನಾವಣೆ ನಡೆಯುತ್ತಿತ್ತು. ೧೯೩೯ರಲ್ಲಿ ವೂಕೇ ಲಾಸ ತಲುಪುವುದಕ್ಕೆ ಮೊದಲೇ ರೀಜೆಂಟ್ ರೇಟನ್ ಟಿಬೆಟ್‌ರ ರಾಷ್ಟ್ರೀಯ ಸಭೆಯಲ್ಲಿ ಆಗಿದ್ದ ದಲೈಲಾಮಾರ ಹೆಸರನ್ನು ಘೋಷಿಸಿದೆ ಮತ್ತು ಸಮರ್ಥಿಸಿದೆ. ೧೯೪೦ ಫೆಬ್ರವರಿ ೨೨ರಂದು ದಲೈಲಾಮಾರು ಸಿಂಹಾಸನಾರೋಹಣ ಮಾಡುವ ಸಮಾರಂಭದಲ್ಲಿ 'ಪೂ' ಅವರ ಹೇಳಿಕೆಯು ಭೂತಾನ್, ಸಿಕ್ಕಿಂ, ನೇಪಾಳ, ಬ್ರಿಟೀಷ್ ಭಾರತದಿಂದ ಬಂದ ಧೂತ ಹೇಳಿಕೆಯು ಅದೇ ಆಗಿತ್ತು. ಬ್ರಿಟೀಷ್ ಭಾರತದ ಪ್ರತಿನಿಧಿಯಾಗಿದ್ದ ಸರ್. ವೆಸಿಲ್ ಗೌಲ್ಡ್‌ನ ಬರವಣಿಗೆ ಹೀಗಿತ್ತು. ಚೈನಾದ ಅಧಿಕಾರದ ಏಳಿಗೆ ಸಿಂಹಾಸನಾರೋಹಣಕ್ಕೆ ಮೊದಲೇ ಸಿದ್ಧಗೊಂಡು ಪ್ರಕಟವಾಗಿತ್ತು. ಸೈನ್ಯದ ಪ್ರಚಾರ ತಂತ್ರವು ರಿಪೋರ್ಟ್‌ನಲ್ಲಿ

---

೧. ಬೈಲುಕುಪ್ಪೆ ಟಿಬೆಟಿಯನ್ನರು ಒಂದು ಸಾಂಸ್ಕೃತಿಕ ಅಧ್ಯಯನ : ಎನ್.ಆರ್.ಚಂದ್ರೇಗೌಡ, ಪುಟ. ೧೦೪.

ದಲೈಲಾಮಾರ ಚಿತ್ರದೊಂದಿಗೆ ಬೂನ್‌ಜೋಂಗ್‌ಶಿನ್ ನಿಂತಿರುವ ಚಿತ್ರವಿದೆ. ಸಿಂಹಾಸನಾರೋಹಣ ಸಮಯದಲ್ಲಿ ಈ ಚಿತ್ರವನ್ನು ತೆಗೆಯಲಾಗಿತ್ತು ಎಂತಲೂ, ಆದರೆ ರಾಷ್ಟ್ರೀಯ ಜನತಾವಾದಿ ಸ್ಟ್ಯಾಂಡಿಂಗ್ ಕಮಿಟಿಯ ಉಪಾಧ್ಯಕ್ಷ 'ನಾಗ್‌ಬೋವ್ಯಾಂಡ್‌ಜಿಗ್ಮಾ'ಯ ಪ್ರಕಾರ ಸಿಂಹಾಸನಾರೋಹಣಕ್ಕೆ ಕೆಲವು ದಿನಗಳ ನಂತರವು ದಲೈಲಾಮಾರೊಂದಿಗೆ ಸ್ವತಃ ಭೇಟಿಯಾಗಿದ್ದಾಗ ಈ ಛಾಯಾಚಿತ್ರ ತೆಗೆದಿದ್ದು ಎಂತಲೂ ಈ ಛಾಯಾಚಿತ್ರದ ಆಧಾರದ ಮೇಲೆ ವೂಜೋಂಗ್‌ರವರ ಧಾವೆ ಏನೆಂದರೆ ಅವರು ಸಿಂಹಾಸನಾರೋಹಣ ಸಮಾರಂಭದಲ್ಲಿ ಅಧ್ಯಕ್ಷರಾಗಿದ್ದರು. ಈ ವಿಷಯವನ್ನು ೧೯೮೯ರ ಆಗಸ್ಟ್ ೩೧ರಂದು "ಟಿಬೆಟ್‌ನಲ್ಲಿಯ ನಾಗ್ಬೋಗಳು" ಹೇಳಿದ್ದಾರೆ.

**೧೪ನೇ ದಲೈಲಾಮಾ:**

ದಲೈಲಾಮಾರು ಟಿಬೆಟಿಯನ್ನರ ಈಗಿನ ಆಧ್ಯಾತ್ಮಿಕ ಮತ್ತು ಲೌಕಿಕ ನಾಯಕ 'ದಲೈ' ಎಂಬ ಶಬ್ದವು ಮಂಗೋಲಿಯ ಭಾಷೆಯ ಶಬ್ದವಾಗಿದ್ದು ಇದರರ್ಥ 'ಸಾಗರ' ಅಥವಾ 'ಜ್ಞಾನದ ಸಂಕೇತ' ಲಾಮಾ ಎಂದರೆ ಮೂರು ರತ್ನಗಳ ಜೋಡಣೆ ಎಂದು. ಆ ರತ್ನಗಳಾವುವೆಂದರೆ ಬುದ್ಧ, ಧರ್ಮ ಮತ್ತು ಸಂಘ. ಟಿಬೆಟ್ ಭಾಷೆಯಲ್ಲಿ 'ಲಾ' ಎಂದರೆ ಹೆಚ್ಚಿನ ಅಥವಾ ಮೀರಿಸಲಾರದ ಮತ್ತು 'ಮಾ' ಎಂದರೆ 'ತಾಯಿ' ಎಂದರ್ಥ. ಲಾಮಾ ಎಂದರೆ ಎಲ್ಲಾ ಸಾಮಾನ್ಯ ಟಿಬೆಟಿಯನ್ನರಿಗೆ ಮಾತೃವಾತ್ಸಲ್ಯ ತೋರಿಸುವ ವ್ಯಕ್ತಿಯಾಗಿರುತ್ತಾನೆ ಎಂದರ್ಥ. [೧]

೧೪ನೇ ದಲೈಲಾಮಾರ ನಿಜವಾದ ಹೆಸರು "ಜೆಂಪಲ್ ಗವಾಂಗ್ ಲ್ಯಾಬ್‌ಸನ್‌ಯಾಶ್ ಟೆಂಜನ್ ಗ್ಯಾಸ್ಟೋ" ಎಂದು. ಇವರು ೧೦೩೫ ನೇ ಜುಲೈ ೬ರಂದು ಟಿಬೆಟ್ ದೇಶದ 'ಅಂಬೋ' ಎಂಬಲ್ಲಿ ಜನಿಸಿದರು. ಎರಡು ವರ್ಷದ ಮಗುವಾಗಿದ್ದಾಗಲೇ ೧೩ನೇ ದಲೈಲಾಮಾರ ಪುನರವತಾರವೆಂದು ಸಂಪ್ರದಾಯಬದ್ಧ-ವಾಗಿ ಗುರುತಿಸಲಾಯಿತು. ನಂತರ ೧೯೩೯ರಲ್ಲಿ ಲಾಸಾ ನಗರಕ್ಕೆ ಕರೆತರಲಾಯಿತು. ೧೯೪೦ರಲ್ಲಿ ಕಿರೀಟ ಧಾರಣೆ ಮಾಡಲಾಯಿತು. 'ಲಿಂಗ್ರಿನ್ ಪೋಚ್' ಗುರುವಿನ ಮಾರ್ಗದರ್ಶನದಲ್ಲಿ ಗ್ಯಾಟೋ ವಿಹಾರದ ಲಾಮಾ, ಪೋಟಾಲದ ಅರಮನೆಯ ಗ್ಯಾಟೋ ವಿಹಾರದಲ್ಲಿ ಶಿಕ್ಷಣವನ್ನು ಪ್ರಾರಂಭಿಸಿದರು. ನಂತರ ಸೆರಾಜ್ ತರಬೇತಿ

---

೧. ಬೈಲುಕುಪ್ಪೆ ಟಿಬೆಟಿಯನ್ನರು ಒಂದು ಸಾಂಸ್ಕೃತಿಕ ಅಧ್ಯಯನ : ಎನ್.ಆರ್.ಚಂದ್ರೇಗೌಡ, ಪುಟ. ೧೦೫.

ಶಾಲೆಯಲ್ಲಿ ಇತಿಹಾಸ, ಪದ್ಯ, ಭವಿಷ್ಯ ಮತ್ತು ತಂತ್ರ ವಿಷಯಗಳನ್ನು ಅಭ್ಯಾಸ ಮಾಡಿದರು. ೨೪ನೇ ವಯಸ್ಸಿನಲ್ಲಿ 'ಲರಂಪಗೇಶ್' ಎಂಬ ಪದವಿಯನ್ನು ಪಡೆದರು. ಇಷ್ಟಲ್ಲದೆ ೧೬ನೇ ವಯಸ್ಸಿನಲ್ಲೇ ಆಂಗ್ಲಭಾಷೆಯನ್ನು ಕೂಡ ಕಲಿತರು. ನಂತರ ದಲೈಲಾಮಾರಾಗಿ ಲೌಕಿಕ ಹಾಗೂ ಆಧ್ಯಾತ್ಮಿಕ ನಾಯಕತ್ವದ ಜವಾಬ್ದಾರಿ ಹಾಗೂ ಅಧಿಕಾರವನ್ನು ವಹಿಸಿಕೊಂಡರು.

೧೯೫೪ರಲ್ಲಿ ದಲೈಲಾಮಾರು ಚೀನಾದ ನಾಯಕ ಮಾವೋರವರ ಆಹ್ವಾನದ ಮೇರೆಗೆ ಚೀನಾಕ್ಕೆ ಭೇಟಿ ಇಟ್ಟರು. ಆಗ ಅಲ್ಲಿ ನಡೆದ ಮಾತುಕತೆಯಿಂದ ಚೀನಿ ಸೈನ್ಯಕ್ಕೂ ಟಿಬೆಟ್ ಪ್ರಜೆಗಳಿಗೂ ಯಾವುದೇ ರೀತಿಯ ಪುನ್ರಾಜಿ ಸೂತ್ರ (ಯಶಸ್ಸು) ಫಲಗೊಳ್ಳಲಿಲ್ಲ. ಹೀಗಾಗಿ ಚೀನಿ ಸೈನಿಕರು ಟಿಬೆಟ್‌ನ ರಾಜಧಾನಿ ಲಾಸಾದ ಮೇಲೆ ಹಠಾತ್ ಧಾಳಿ ಪ್ರಾರಂಭಿಸಿದರು. ನಿರಂತರ ಧಾಳಿಯಿಂದಾಗಿ ಏಳು ದಿನಗಳ ನಂತರ ದಲೈಲಾಮಾರು ೧೯೫೯ ಮಾರ್ಚ್ ೧೭ರಂದು ಪೋಟಾಲ ಅರಮನೆಯಿಂದ ರಾತ್ರೋ ರಾತ್ರಿ ತಲೆಮರೆಸಿಕೊಂಡು ಕುದುರೆ ಏರಿ ಭಾರತದ ಕಡೆಗೆ ಪರಾರಿಯಾದರು. ಇವರು ರಾತ್ರಿ ಹಗಲೆನ್ನದೇ ಕಾಡು ಮೇಡುಗಳಲ್ಲಿ ಪ್ರಯಾಣ ಬೆಳೆಸಿ ಮೊದಲೇ ನೆಹರೂರವರ ಆಮಂತ್ರಣ ಪಡೆದು ಭಾರತದ ಒಂದು ರಾಜ್ಯವಾದ ಹಿಮಾಚಲ ಪ್ರದೇಶದ ಧರ್ಮಸಾಲಕ್ಕೆ ಬಂದು ತಲುಪಿದರು. ದಲೈಲಾಮಾರ ಹಿಂದೆ ಸುಮಾರು ಒಂದು ಲಕ್ಷ ಟಿಬೆಟ್ ನಿರಾಶ್ರಿತರು ಕೈಗೆ ಸಿಕ್ಕಿದ ಚಿನ್ನ, ಬೆಳ್ಳಿಯಿಂದ ತಯಾರಿಸಿದ ಒಡವೆ ವಸ್ತ್ರಗಳನ್ನು ತೆಗೆದುಕೊಂಡು ಹೇಸರ ಕತ್ತೆಗಳನ್ನೇರಿ ತಮ್ಮ ಪ್ರಯಾಣವನ್ನು ಭಾರತದೆಡೆಗೆ ಬೆಳೆಸಿದರು. ಹೀಗೆ ದೇಶಬಿಟ್ಟು ದಿಕ್ಕಾಪಾಲಾಗಿ ಓಡಿಹೋದ ಟಿಬೆಟಿಯನ್ನರು ಈಗ ಭಾರತ, ನೇಪಾಳಗಳಲ್ಲಿ ಬಹುಸಂಖ್ಯೆಯಲ್ಲಿ ನೆಲೆ ನಿಂತಿದ್ದಾರೆ.

ಈಗಲೂ ಕೂಡ ದಲೈಲಾಮಾರನ್ನು ಆಧ್ಯಾತ್ಮಿಕ ಮತ್ತು ಲೌಕಿಕ ನಾಯಕರೆಂದು ಘೋಷಿಸಲ್ಪಟ್ಟಿದ್ದಾರೆ. ಹಾಗೆಯೇ ಗಡಿಪಾರು ಸರ್ಕಾರದ ಔಪಚಾರಿಕ ಮುಖ್ಯಸ್ಥರೂ ಆಗಿದ್ದಾರೆ. ೧೯೫೯ರಿಂದಲೂ ಟಿಬೆಟ್ ಸ್ವಾತಂತ್ರ್ಯ ಪಡೆದು ಸ್ವದೇಶಕ್ಕೆ ಹಿಂದಿರುಗಿ ಹೋರಾಟವನ್ನು ಮಾಡುತ್ತಿದ್ದಾರೆ. ಇದಕ್ಕಾಗಿ ೧೯೮೯ರಲ್ಲಿ 'ನೋಬೆಲ್‌ಶಾಂತಿ' ಪಾರಿತೋಷಕವನ್ನು ಕೊಡಲಾಯಿತು. ಆಗಾಗ್ಗೆ ದೀರ್ಘಾವಧಿಯ ಬೋಧನಾ ಚಟುವಟಿಕೆಗಳನ್ನು ಬೋಧಗಯಾದಲ್ಲಿ ಬೌದ್ಧಧರ್ಮದ ಬಗ್ಗೆ ವಾದ ವಿವಾದಗಳನ್ನು ನಡೆಸುತ್ತಾರೆ. ಭಾರತದಾದ್ಯಂತ ಮಾತ್ರವಲ್ಲದೆ ಇಡೀ ಪ್ರಪಂಚದಲ್ಲೇ ಆಗಾಗ ಸಂಚರಿಸಿ

ಬೌದ್ಧಧರ್ಮ ಮತ್ತು ವಿಶ್ವಶಾಂತಿಯ ಬಗ್ಗೆ ಉಪನ್ಯಾಸಗಳನ್ನು ನೀಡುತ್ತಿದ್ದಾರೆ. ಇವರು ಟಿಬೆಟ್‌ನ ಪ್ರಮುಖವಾದ ಬೌದ್ಧಧರ್ಮದ ನಾಲ್ಕು ಪಂಗಡಗಳ ಸಂಪ್ರದಾಯಗಳನ್ನು ವಿಶಾಲವಾಗಿ ಅಧ್ಯಯನ ಮಾಡಿದ್ದಾರೆ. ಚಿಂತಕರೊಡನೆ ಹಲವಾರು ರೀತಿಯ ವಾಗ್ವಾದಗಳಲ್ಲಿ ಭಾಗವಹಿಸಿ ಟೀಕೆ ಟಿಪ್ಪಣಿಗಳನ್ನು ಸ್ವೀಕರಿಸಿದ್ದಾರೆ. ನನ್ನ ದೇಶ ನನ್ನ ನೆಲ ಮತ್ತು ನನ್ನ ಜನ ಹಾಗೂ ಗಡಿಪಾರಿನಲ್ಲಿ ಸ್ವಾತಂತ್ರ್ಯ ಎಂಬ ತಂತ್ರಗಳನ್ನು ಬರೆದಿದ್ದಾರೆ. ನಂತರ ಇನ್ನೂ ಕೆಲವು ಕೃತಿಗಳಾದ ವಿಶ್ವಶಾಂತಿಗಾಗಿ ಒಂದು ಮಾನವ ವಿಧಾನ, ಕರುಣೆ, ಕಾಲಚಕ್ರ ತಂತ್ರಗಳನ್ನು ಬರೆದಿದ್ದಾರೆ.[೧]

**ಪವಿತ್ರ ಗ್ರಂಥಗಳು:**

ಹಿಂದೂಗಳಿಗೆ ರಾಮಾಯಣ, ಮಹಾಭಾರತ, ಧರ್ಮಶಾಸ್ತ್ರ, ನೀತಿಶಾಸ್ತ್ರ, ಭಗವದ್ಗೀತಾ, ಕ್ರಿಶ್ಚಿಯನ್ನರಿಗೆ ಬೈಬಲ್, ಮುಸಲ್ಮಾನರಿಗೆ ಖುರಾನ್ ಪವಿತ್ರ ಗ್ರಂಥಗಳಿರುವಂತೆ ಟಿಬೆಟಿಯನ್ನರಿಗೆ 'ಕಂಜೂರ್' ಮತ್ತು ತೋಂಜೂರ್ ಎಂಬ ಧರ್ಮಗ್ರಂಥಗಳಿವೆ. ಇವೇ ಅಲ್ಲದೇ ಬೌದ್ಧಗ್ರಂಥಗಳನ್ನು ಸ್ವೀಕರಿಸಲಾಗಿದೆ.

೧) ಕಂಜೂರ್ ಗ್ರಂಥವು ಬುದ್ಧನ ನೇರ ಬೋಧನೆಯಾಗಿದ್ದು, ಸಂಸ್ಕೃತದಿಂದ ಟಿಬೆಟ್ ಭಾಷೆಗೆ ಭಾಷಾಂತರಿಸಲಾಗಿದೆ. ೧೦೪ ಭಾಗಗಳನ್ನು ಹೊಂದಿದೆ. ಒಂದೊಂದು ಭಾಗವೂ ೪೦೦ ಪುಟಗಳಷ್ಟಿವೆ.

೨) ತೆಂಜೂರ್ ಅಥವಾ ತೋಂಜೂರ್ ಗ್ರಂಥವು ಕಂಜೂರ್ ಗ್ರಂಥದ ಸವಿಸ್ತಾರ ವಿವರಣೆಯನ್ನು ೨೦೮ ಭಾಗಗಳಲ್ಲಿ ಅರ್ಥೈಸಲಾಗಿದೆ.

**ಇ) ಧಾರ್ಮಿಕ ಪಂಗಡಗಳು:**

ಟಿಬೆಟಿಯನ್ನರಲ್ಲಿ ನಾಲ್ಕು ಧಾರ್ಮಿಕ ಪಂಗಡಗಳಿವೆ. ಅವುಗಳು (ಮೊದಲಿಗೆ ಬಾನ್ ಸಂಪ್ರದಾಯದ ಬಾನ್ಪೋ (ಬೋನ್ಪೋ ಪಂಗಡದವರು) ನಿಂಗ್ಮಪ, ಗೆಲುಕ್ಪಾ, ಸಖ್ಯಪ ಮತ್ತು ಕಗಿದ್ ಅಥವಾ ಕಜುಪ ಎಂಬುದಾಗಿದೆ.

೧) **ನಿಂಗ್ಮಪ** (NENGMAPA): ಟಿಬೆಟ್ ಬೌದ್ಧಧರ್ಮದ ಮೂಲ ಪಂಗಡವೇ ನಿಂಗ್ಮಪ. ಶಾಂತರಕ್ಷಿತ ಪದ್ಮಸಂಭವ ಮತ್ತು ಟಿಬೆಟ್‌ನ ರಾಜ ಟ್ರೆಸಂಗ್ ಡೆಟ್ಸಾಗ್‌ರವರು ಈ ಪಂಗಡದ ಸಂಸ್ಥಾಪಕರು. ಇವರ ಅನುಯಾಯಿಗಳೇ ನಿಂಗ್ಮಪ ಗುಂಪಿನವರು. ತೋಮ್ನಿಸಂಬೋಟ್‌ರ ಕಾಲದಿಂದ ರಿಂಚಿಗ್

೧. ಬೈಲುಕುಪ್ಪೆ ಟಿಬೆಟಿಯನ್ನರು ಒಂದು ಸಾಂಸ್ಕೃತಿಕ ಅಧ್ಯಯನ : ಎನ್.ಆರ್.ಚಂದ್ರೇಗೌಡ, ಪುಟ. ೧೦೬.

ಚಾಂಪೊರ ಕಾಲದಲ್ಲಿ ಸಂಸ್ಕೃತದಿಂದ ಟಿಬೆಟ್ ಭಾಷೆಗೆ ಭಾಷಾಂತರಿಸಿದ ಬೋಧನೆಗಳನ್ನು ಅನುಸರಿಸುತ್ತಾರೆ. ಇವರ ವಿಹಾರಕ್ಕೆ 'ನಾಮ್‌ಡ್ರೋಲಿಂಗ್' (Nomdroling) ಎಂದು ಹೆಸರಿಡಲಾಗಿದೆ.

೨) **ಸಂಖ್ಯಪ** (SAKYAPA) ಸಾವಿರಾರು ವರ್ಷಗಳವರೆಗೆ ಬುದ್ಧನ ಬೋಧನೆಗಳನ್ನು ಸಂರಕ್ಷಿಸಲ್ಪಟ್ಟ ಗುಂಪಿನ ಜನರೇ ಸಖ್ಯಪ ಸಂತತಿಯವರು. ೧೧ನೇ ಶತಮಾನದಲ್ಲಿ ಹೊಸತಂತ್ರವನ್ನು ಅಧ್ಯಯನ ಮಾಡಲು ಕೊಂಚೊಕ್‌ಗ್ಯಲ್ಪೊ ಎಂಬುವರು ಸಖ್ಯವಿಹಾರವನ್ನು ಸ್ಥಾಪಿಸಿದರು. ಇವರ ನಂತರ ೧) ಸಚನ್‌ಕುಂಗನಿಗ್ಪೊ ೨) ಲೊಪೊಲ್ ಸೊನವತ್ ಟ್ಸೈಮೊ ೩)ಜಿಟ್‌ಸನ್ ಡಗ್ಮಾಗ್ಯಾಲ್ಟಿಸನ್ ೪) ಸಖ್ಯಪಂಡಿತ ಕುಂಗ್ ಗ್ಯಾಲ್ಟಿಸನ್ ೫) ಚೋಗ್ಯಲ್ ಫಕ್ಪಾ ಎಂಬ ಐದು ಜನ ಲಾಮಾರವರ ಮಾರ್ಗದರ್ಶನದಲ್ಲಿ ಸಖ್ಯವಿಹಾರ ಮುಂದುವರೆಯಿತು. ಇವರು ತಾಂತ್ರಿಕ ಬೋಧನೆಗಳನ್ನು ಅಧ್ಯಯಿಸುತ್ತಾರೆ.

೩) **ಗೆಲುಕ್ಪಾ**(GELOPKA): 'ಜಾಮ್‌ಛೆನ್ ವೋಯಿಜ್ ಸಖ್ಯಾಎಸೆ' ಎಂಬುವರು ಗೆಲುಕ್ಪಾ ಪಂಗಡದ ಸಂಸ್ಥಾಪಕರು. ಇವರು ಸೆರಾ ವಿಹಾರವನ್ನು ಸ್ಥಾಪಿಸಿದ ಮಹಾನ್ ವ್ಯಕ್ತಿ ಸೆರಾ ಎಂಬ ಶಬ್ದವು ಸೇವಾ ಮತ್ತು ರ ಎಂಬ ಅಕ್ಷರಗಳಿಂದ ರೂಪತಾಳಿದೆ. ಸೆರಾ ಎಂದರೆ ಬೇಲಿಯಿಂದ ಸುತ್ತುವರಿದ ಪೊದೆ ಎಂಬುದಾಗಿದೆ. ಇವರ ವಿಹಾರಗಳು ಸೆರಾಜೆ ಮತ್ತು ಪೆರಾಮೆ.[೧]

೪) **ಕಜುಪ**(KAGYUOPA): ಮರ್ಪಾ (Marpa) ಭಾಷಾಂತರ ಕಾರ ಮಿಲೆರೆಪ ಮತ್ತು ಗಂಪಪ ಇವರುಗಳು ಕಜುಪ ಗುಂಪಿನ ಅನುಯಾಯಿಗಳು ಕಜುಪ ಗುಂಪನ್ನು ಡ್ರಿಕುಂಗ್ ಸಂಗೋನ್ ಇವರು ನಾಗಾರ್ಜುನ ಪುನರವತಾರ ಸ್ಥಾಪಿಸಿದ ಮಹಾನ್ ವ್ಯಕ್ತಿ

ಮೇಲ್ಕಂಡ ಎಲ್ಲಾ ಗುಂಪಿನ ಜನರು ಹಾಗೂ ಈ ಗುಂಪುಗಳಿಗೆ ಸೇರಿದ ವಿಹಾರಗಳನ್ನು ಬೈಲುಕುಪ್ಪೆಯ ಟಿಬೆಟ್ ನಿರಾಶ್ರಿತ ಕೇಂದ್ರಗಳಲ್ಲಿ ಸ್ಥಾಪಿಸಲಾಗಿದೆ.

---

೧. ಬೈಲುಕುಪ್ಪೆ ಟಿಬೆಟಿಯನ್ನರು ಒಂದು ಸಾಂಸ್ಕೃತಿಕ ಅಧ್ಯಯನ : ಎನ್.ಆರ್.ಚಂದ್ರೇಗೌಡ, ಪುಟ. ೧೦೭.

**ಬಾನ್ ಸಂಪ್ರದಾಯ:**

ಮೂಲತಃ ಟಿಬೆಟಿಯನ್ನರು ತಮ್ಮದೇ ಆದ ವಿಶಿಷ್ಟ ರೀತಿಯ ಸಂಪ್ರದಾಯವನ್ನು ಹೊಂದಿದ್ದರು. ಇದನ್ನು ಬಾನ್ ಸಂಪ್ರದಾಯವೆಂದು ಕರೆಯುತ್ತಿದ್ದರು. ಬೋನ್ಪೋ ಪ್ರಕಾರ ಈ ಸಂಪ್ರದಾಯವು ಪ್ರಾರಂಭದಲ್ಲಿ ೧೮ ಜನ ಜ್ಞಾನವಂತ ಸಂತರಿಂದ ಸ್ಥಾಪನೆಯಾಗಿ ಲಾರ್ಡ್ ಸೆನರಾಜ್ ಎಂಬ ದೊರೆಯು ಬಾನ್ ಸಂಪ್ರದಾಯ ಸಂಸ್ಥಾಪಕನೆಂದು ಹೇಳಲಾಗಿದೆ. ಪಾಶ್ಚಾತ್ಯ ರಾಷ್ಟ್ರಗಳಿಂದ ಬಂದ ವ್ಯಾಪಾರಿಗಳು ಬಾನ್ ಧರ್ಮವನ್ನು ಟಿಬೆಟಿಗೆ ತಂದರು ಎಂಬ ಮಾತೂ ಇದೆ. ಪೂರ್ವದಲ್ಲಿ ಟೆಂಪಾಶೆರಾಬ್ ಎಂಬುವವನು ಸ್ವರ್ಗದಲ್ಲಿ ಈ ಸಂಪ್ರದಾಯವನ್ನು ಕಲಿತು ಭೂಲೋಕದ ಕೈಲಾಸ ಪರ್ವತ ತಪ್ಪಲಲ್ಲಿ ಬಂದು ಜನತೆಗೆ ಕರುಣೆಯ ಬಗ್ಗೆ ಬೋಧಿಸಲು ಹಾಗೂ ದುಃಖಿತ ವ್ಯಕ್ತಿಗಳಿಗೆ ಶಾಂತಿ ಸಂದೇಶ ಸಾರಲು ಬಂದು ಬಾನ್ ಸಂಪ್ರದಾಯ ಸ್ಥಾಪಿಸಿದನೆಂಬ ನಂಬಿಕೆಯಿದೆ. ಇದರ ಬಗ್ಗೆ ೧೦ ಹಾಗೂ ೧೧ನೇ ಶತಮಾನದ ಹಲವಾರು ಪುರಾವೆಗಳು ದೊರೆತಿದ್ದು, ಬಿಳಿನೀರು ಮತ್ತು ಕಪ್ಪುನೀರಿನ ತತ್ವವನ್ನು ಪ್ರತಿಪಾದಿಸುವ ಸಂಪ್ರದಾಯ ಇದಾಗಿದೆ. ಈ ಧರ್ಮವು ಸುಮಾರು ಕ್ರಿ.ಶ. ೭೫೫ರಲ್ಲಿ ಸಂಪೂರ್ಣವಾಗಿ ನಶಿಸಿಹೋಗಿದ್ದು, ೧೯ನೇ ಶತಮಾನದಲ್ಲಿ ಶೋರ್ಜಾಚಶಿಗ್ಯಾಟಸನ್ ಸುಮಾರು ೧೮ ಅಧ್ಯಾಯಗಳ ಬರವಣಿಗೆಯನ್ನು ಸಂಗ್ರಹಿಸಿ ಬಾನ್ ಸಂಪ್ರದಾಯಕ್ಕೆ ಪುನಶ್ಚೇತನ ಕೊಡಲಾಯಿತು. ಇಷ್ಟಲ್ಲದೆ ಕನ್ಯಾ ಜಿಗ್ನೆಸಿ ಎಂಬುವವರು ಟಶಿಗ್ಯಾನ್‌ನ ಅನುಯಾಯಿಗಳಾದರು. ಆದರೆ ಚೀನೀಯರ ಧಾಳಿಯಿಂದ ಬಾನ್ ಸಂಪ್ರದಾಯವು ನಾಶವಾಯಿತು. ಈಗ ಭಾರತ ಮತ್ತು ನೇಪಾಳದಲ್ಲಿ ಬಾನ್ ಪ್ರಚಾರ ಕೈಗೊಂಡು ನೇಪಾಳದಲ್ಲಿ ಅಂತರರಾಷ್ಟ್ರೀಯ ಬಾನ್ ಸಂಸ್ಥೆಯನ್ನು ಸ್ಥಾಪಿಸಿ ೧೯೮೮ರಲ್ಲಿ ಸಾರಾನಾಥದಲ್ಲಿ ನಡೆದ ಒಂದು ಸಮ್ಮೇಳನದಲ್ಲೂ ಬಾನ್ ಸಂಪ್ರದಾಯವನ್ನು ಉಳಿಸುವಂತೆ ಒತ್ತಾಯ ತರಲಾಗಿದೆ.[೧]

**೫) ಟಿಬೆಟಿಯನ್ನರ ಹಬ್ಬಗಳು ಮತ್ತು ವಿಶೇಷ ದಿನಗಳು:**

ಇನ್ನಿತರ ಜನಾಂಗದ ಜನರಂತೆ ಟಿಬೆಟಿಯನ್ನರೂ ಕೂಡ ಹಲವಾರು ಪ್ರಮುಖ ಹಬ್ಬಗಳನ್ನು ಆಚರಿಸುತ್ತಾರೆ. ಅವುಗಳನ್ನು ಕೆಳಕಂಡಂತೆ ಹೆಸರಿಸಬಹುದು.

೧) ಲೋಸರ್ (ಹೊಸವರ್ಷ) ಹಬ್ಬ ಫೆಬ್ರವರಿ ಮತ್ತು ಮಾರ್ಚ್‌ನಲ್ಲಿ.

೨) ಚೀನೀಯರ ವಿರುದ್ಧ ಟಿಬೆಟಿಯನ್ನರ ಬಂಡಾಯ ದಿನ ಮಾರ್ಚ್ ೧೦

೩) ಬುದ್ಧಸಖ್ಯಾಮುನಿಯ ಹುಟ್ಟು, ಜ್ಞಾನೋದಯ, ಐಕ್ಯದಿನ

೧. ಬೈಲುಕುಪ್ಪೆ ಟಿಬೆಟಿಯನ್ನರು ಒಂದು ಸಾಂಸ್ಕೃತಿಕ ಅಧ್ಯಯನ : ಎನ್.ಆರ್.ಚಂದ್ರೇಗೌಡ, ಪುಟ. ೧೦೮.

೪) ಸಾರ್ವತ್ರಿಕ ಪ್ರಾರ್ಥನೆ

೫) ಬುದ್ಧ ಸಖ್ಯಾಮುನಿಯ ಮೊದಲ ಬೋಧನೆ

೬) ಭಾರತದ ಸ್ವಾತಂತ್ರ್ಯದಿನ ಆಗಸ್ಟ್ ೧೫

೭) ಟಿಬೆಟಿನ ಸ್ವಾತಂತ್ರ್ಯದಿನ ಸೆಪ್ಟೆಂಬರ್ ೨

೮) ಗಾಂಧೀ ಜಯಂತಿ ಅಕ್ಟೋಬರ್೨

೯) ಬುದ್ಧ ಸಖ್ಯಾಮುನಿಯ ಸ್ವರ್ಗದಿಂದ ಇಳಿದು ಬಂದ ದಿನ

೧೦) ೧೪ನೇ ದಲೈಲಾಮರು ಶಾಂತಿ ಪಾರಿತೋಷಕ ಪಡೆದ ದಿನ ಡಿಸೆಂಬರ್ ೧೦.

೧೧) ನವ ಅಪಶಕುನ ದಿನ (ಆಷಾಡ)

೧೨) ಭಾರತದ ಗಣರಾಜ್ಯ ದಿನ - ಜನವರಿ ೨೬

೧೩) ಸ್ವಾಗತದ ದಿನಗಳು ಟಿಬೆಟ್, ತಿಂಗಳ ಮೊದಲ ೧೫

೧೪) ೧೪ನೇ ದಲೈಲಾಮಾನ ಜನ್ಮ ದಿನ ಜುಲೈ ೬

**ಲೋಸರ್ ಹಬ್ಬ:**

ಟಿಬೆಟಿಯನ್ನರ ಆಚಾರ-ವಿಚಾರಗಳಲ್ಲಿ ಅಥವಾ ಆಚರಿಸುವ ಹಬ್ಬಗಳಲ್ಲಿ ಕಚ್ಚಿ ಅಥವಾ ಲೋಸರ್ ಎಂಬ ಹಬ್ಬವು ಬಹು ಪ್ರಸಿದ್ಧವಾಗಿದೆ.[೧] ಭಾರತದಲ್ಲಿ ಪ್ರತಿವರ್ಷ ಹೊಸ ವರ್ಷಾರಂಭವನ್ನು ಹೇಗೆ ಯುಗಾದಿ ಎಂಬುದಾಗಿ ಆಚರಿಸುತ್ತೇವೆಯೋ, ಅದೇ ರೀತಿ ಟಿಬೆಟಿಯನ್ನರು ಅನಾದಿಕಾಲದಿಂದಲೂ ಹೊಸ ವರ್ಷದ ಪ್ರಾರಂಭದ ದಿನವನ್ನು ಲೋಸರ್ ಹಬ್ಬವೆಂದು ಆಚರಿಸುತ್ತಾರೆ. ಈ ಹಬ್ಬವು ಪ್ರತಿವರ್ಷ ಸೌರಮಾನ ಪಂಚಾಂಗದಲ್ಲಿ ಫೆಬ್ರವರಿ ಅಥವಾ ಮಾರ್ಚ್ ತಿಂಗಳಲ್ಲಿ ಆಚರಿಸಲ್ಪಡುತ್ತದೆ. ಇದನ್ನು ಒಂದು ದಿನದಿಂದ ಹದಿನೈದು ದಿನಗಳವರೆಗೆ ಆಚರಿಸುತ್ತಾರೆ. ಹಬ್ಬದ ಪ್ರಾರಂಭದ ಮೂರು ದಿನಗಳು ವಿಶೇಷವಾದವು. ಮೊದಲ ದಿನದಂದು ಮನೆಮಠಗಳನ್ನು ಶುಚಿಯಾಗಿ ಮಾಡಿ, ದೇವರಿಗೆ ತಾವು ತಯಾರಿಸಿದ ವಿವಿಧ ತಿಂಡಿಗಳನ್ನು ಎಡೆ ಇಟ್ಟು ಪೂಜೆ ಮಾಡುತ್ತಾರೆ. ಅಕ್ಕಿ, ಬಾರ್ಲಿ ಮತ್ತು ಗೋಧಿಯಿಂದ ಅಂದರೆ ಅವುಗಳ ಹಿಟ್ಟಿನಿಂದ ತಯಾರಿಸಿದ ತಿಂಡಿಗಳನ್ನು ತಿನ್ನುತ್ತಾರೆ. ಪ್ರತಿಯೊಬ್ಬರೂ ಹೊಸ ಬಟ್ಟೆಯನ್ನುಟ್ಟು ಸಂಭ್ರಮದಿಂದ ನಲಿಯುತ್ತಾರೆ. ಈ ಹಬ್ಬದಲ್ಲಿ ದೊಡ್ಡವರಿಗಲ್ಲದಿದ್ದರೂ ಮಕ್ಕಳಿಗೆ ಅಡಿಯಿಂದ ಮುಡಿಯವರೆಗೆ ಪ್ರತಿಯೊಂದನ್ನು ಹೊಸದನ್ನಾಗಿ ಧರಿಸಬೇಕಂತೆ.

---

೧. ಬೈಲುಕುಪ್ಪೆ ಟಿಬೆಟಿಯನ್ನರು ಒಂದು ಸಾಂಸ್ಕೃತಿಕ ಅಧ್ಯಯನ : ಎನ್.ಆರ್.ಚಂದ್ರೇಗೌಡ, ಪುಟ. ೧೮೯.

ಅದೇ ದಿನ ಪಗಡೆ, ಜೂಜು, ನೃತ್ಯ, ಸಂಗೀತ ಮತ್ತು ಹಾಸ್ಯ ಮುಂತಾದ ಚಟುವಟಿಕೆಗಳಲ್ಲಿ ಕಾಲ ಕಳೆಯುತ್ತಾರೆ.

ಹಬ್ಬದ ಮೊದಲನೆ ದಿನವನ್ನು 'ಲಾಮಾ ಲೋಸರ್' ಎಂಬುದಾಗಿಯೂ ಎರಡನೆಯ ದಿನವನ್ನು 'ಕಿಂಗ್ ಲೋಸರ್' ಎಂತಲೂ, ಮೂರನೆಯ ದಿನವನ್ನು 'ಜನರ ಲೋಸರ್' ಎಂತಲೂ ಕರೆಯಲಾಗುವುದು.[೧]

ಮೊದಲನೆಯ ದಿನ "ಲಾಮಾಲೋಸರ್" ಅನ್ನು ಆಚರಿಸುವ ಮುನ್ನಾ ದಿನಗಳಲ್ಲಿ ಮನೆಗೆ ಸುಣ್ಣ ಬಣ್ಣ ಬಳಿದು ಮನೆಯ ಒಳಗಡೆ ಪಾತ್ರೆ–ಪಗಡಿ, ಬಟ್ಟೆ ಮತ್ತು ಪೀಠೋಪಕರಣಗಳನ್ನು ಸ್ವಚ್ಛಗೊಳಿಸಿ ಲೋಸರ್‌ಗಾಗಿ ಸಿದ್ಧವಿದ್ದು ಪ್ರಾರಂಭದ ದಿನ ಮುಂಜಾನೆ ೪ ಗಂಟೆಗೆ ಎದ್ದು ಮನೆಮಂದಿಯೆಲ್ಲಾ ಮಿಂದು ಮಡಿಯುಟ್ಟು ಅಂದರೆ ಹೊಸ ಬಟ್ಟೆಯನ್ನು ಧರಿಸಿ ಭಗವಾನ್ ಬುದ್ಧ ಹಾಗೂ ಮಹಾನ್ ಲಾಮಾಗಳನ್ನು ಬಹಳ ಭಕ್ತಿಯಿಂದ ಪೂಜಿಸುವರು. ಪೂಜಿಸುವ ಕಂಚಿನ ದೀಪಗಳಲ್ಲಿ ತುಪ್ಪವನ್ನು ತುಂಬಿ ಹತ್ತಿಯಿಂದ ದೀಪ ಬೆಳಗಿಸಿ, ಗೋಧಿ ಪುಡಿಯಲ್ಲಿ ತುಪ್ಪ ಬೆರೆಸಿ, ಬಟ್ಟಲಲ್ಲಿ ಇಟ್ಟು, ಗೋಧಿ, ಮೈದಾದಿಂದ ಮಾಡಿದ ಚಿರೋಟಿ ಹಾಗೂ ಹಣ್ಣು ಹಂಪಲು ಮತ್ತು ತಂಪಾದ ಪಾನೀಯಗಳನ್ನು ನೈವೇದ್ಯವೆಂದು ದೇವರ ಮುಂದಿಟ್ಟು ಟಿಬೆಟಿಯನ್ನರೇ ತಯಾರಿಸಿದ ಸುಗಂಧಭರಿತ ಕಡ್ಡಿಯಿಂದ ಪೂಜೆ ಮಾಡುತ್ತಾರೆ. ಅಂದು ಬೆಳಿಗ್ಗೆ ಮನೆಯವರೆಲ್ಲ "ರಾಗಿ ಅಥವಾ ಭತ್ತದಿಂದ" ತಯಾರಿಸಿದ 'ಚಾಂಗ್' ಅನ್ನು ಕುಡಿಯುತ್ತಾರೆ. ಅನಂತರ ಅವರವರ ವರ್ಗಕ್ಕೆ ಸೇರಿದ ಬೌದ್ಧ ಸ್ಥೂಪಗಳಿಗೆ ಹೋಗಿ ಬುದ್ಧನನ್ನು ಆರಾಧಿಸಿ ಲಾಮಾಗಳಿಂದ ಆಶೀರ್ವಾದವನ್ನು ಪಡೆಯುತ್ತಾರೆ. ಪೂಜೆಯಿಂದ ಹಿಂದಿರುಗಿದ ನಂತರ ವಿಧವಿಧವಾಗಿ ತಯಾರಿಸಿದ ತಿಂಡಿಯನ್ನು ತಿಂದು ವರ್ಷವಿಡೀ ಶುಭವಾಗಲೀ ಎಂದು ಹಾಡಿ ಕುಣಿದು ಆನಂದಿಸುತ್ತಾರೆ.[೨]

ಎರಡನೆಯ ದಿನ ಎಲ್ಲರೂ ಬಂಧು ಬಾಂಧವರ ಮನೆಗೆ ಹೋಗಿ ಹಾಡುವುದು, ಕುಣಿಯುವುದು, ಜೂಜಾಡುವುದು ಮತ್ತು ಚಾಂಗ್ ಕುಡಿಯುವುದು ಮುಂತಾದ ಚಟುವಟಿಕೆಗಳಿಂದ ಸಂತೋಷಪಡುತ್ತಾರೆ. ಈ ಎರಡನೆಯ ದಿನವನ್ನು "ರಾಜನ ಲೋಸರ್" (King's Loser)ಎಂದು ಕರೆಯುತ್ತಾರೆ. ಕಾರಣ ತಮ್ಮ ಧಾರ್ಮಿಕ ಕಾಯಕ ದಲೈಲಾಮಾರು ಪೋಟಾಲಾ ಅರಮನೆಯಲ್ಲಿ ಹೊರದೇಶದಿಂದ ಬಂದವರಿಗೆ ಹಾಗೂ ಟಿಬೆಟಿಯನ್ನರಿಗೆ ಧರ್ಮ ಬೋಧನೆ ಮಾಡುತ್ತಾರೆ.

---

೧. ಬೈಲುಕುಪ್ಪೆ ಟಿಬೆಟಿಯನ್ನರು ಒಂದು ಸಾಂಸ್ಕೃತಿಕ ಅಧ್ಯಯನ : ಎನ್.ಆರ್.ಚಂದ್ರೇಗೌಡ, ಪುಟ. ೧೧೧.

೨. ಅದೇ, ಪುಟ. ೧೧೨.

ಮೂರನೆಯ ದಿನದ ಲೋಸರನ್ನು "ಜನರ ಲೋಸರ್" (People Loser) ಎಂದು ಕರೆಯುವರು. ಈ ದಿನದಂದು ವರ್ಗತಾರತಮ್ಯವಿಲ್ಲದೆ ಎಲ್ಲಾ ಜನರು ಹಾಗೂ ಸ್ನೇಹಿತರನ್ನು ಆಹ್ವಾನಿಸಿ ದೇವಾಲಯ ಅಥವಾ ಅರಮನೆಯಲ್ಲಿ ತಮ್ಮ ಏಕತೆಯನ್ನು ಮೆರೆಯುವರು. ಇನ್ನುಳಿದ ೧೨ದಿನಗಳಲ್ಲಿ ವಿವಾಹಗಳು ಹೇರಳವಾಗಿ ಜರುಗುತ್ತವೆ. ಇದನ್ನು ೧೩ ದಿನಗಳ ತನಕ ಆಚರಿಸುತ್ತಾರೆ. ಈ ದಿನಗಳಲ್ಲಿ ಧ್ವನಿಸುರುಳಿ, ವೀಡಿಯೋ ನೋಟ ಹಾಗೂ ಸಂಗೀತ ಮತ್ತು ನೃತ್ಯ ಸಂಜೆಗಳನ್ನು ಏರ್ಪಡಿಸಿ ಕುಣಿದು ಕುಪ್ಪಳಿಸುತ್ತಾರೆ. ಪ್ರವಾಸಕ್ಕೆಂದು ಸ್ನೇಹಿತರು ಬೇರೆಡೆಗೆ ಹೋಗಿ ಕಾಲ ಕಳೆಯುತ್ತಾರೆ. ಈ ದಿನಗಳಲ್ಲಿ ವ್ಯಾಪಾರಕ್ಕೆಂದು ಭಾರತದಾದ್ಯಂತ ಹೋಗಿದ್ದ ಗಂಡಸರು ಮತ್ತು ಹೆಂಗಸರು ಮನೆಗೆ ಬಂದಿರುತ್ತಾರೆ. ಈ ದಿನಗಳನ್ನು ಬಹುಸಂಭ್ರಮದಿಂದ ಕಳೆಯುತ್ತಾರೆ. [೧]

ಕೊನೆಯ ಹದಿನೈದನೆಯ ದಿನದಂದು "ಹುಣ್ಣಿಮೆ"ಯಾಗಿದ್ದು, ಅಂದು ದೇವತೆಗಳಿಗಾಗಿ ತಯಾರಿಸಿದ ತಿಂಡಿ-ತಿನಿಸುಗಳನ್ನು ವಿಹಾರಕ್ಕೆ ತೆಗೆದುಕೊಂಡು ಹೋಗಿ ದೇವತೆಗಳಿಗೆ ನೈವೇದ್ಯ ನೀಡಿ ಅಂದಿನ ರಾತ್ರಿ ಇಡೀ "ಕಾಡೆಮ್ಮೆ ನೃತ್ಯ" ಟಿಬೆಟ್ ಜಾನಪದ ನೃತ್ಯಗಳ ರಸಮಂಜರಿ ಕಾರ್ಯಕ್ರಮವನ್ನು ಹಮ್ಮಿಕೊಂಡು ರಾತ್ರಿ ಇಡೀ ಜಾಗರಣೆ ಮಾಡಿ ಕಾಲ ಕಳೆಯುತ್ತಾರೆ. ಹೆಚ್ಚಿನಾಂಶ ಲೋಸರನ ೧೫ ದಿನಗಳಲ್ಲಿ ಟಿಬೆಟಿಯನ್ನರು ವಿವಾಹಗಳನ್ನು ಮಾಡುತ್ತಾರೆ. ಕಾರಣವೆಂದರೆ ಈ ದಿನಗಳು ಶುಭದಿನ ಗಳೆಂದು ನಂಬಿರುತ್ತಾರೆ.

ಟಿಬೆಟಿಯನ್ನರು ಕಾಲಚಕ್ರ ಆಚರಣೆಯನ್ನು ವಿಶ್ವಶಾಂತಿಗಾಗಿ ಆಚರಿಸುವ ಪ್ರಮುಖ ಯಾಗವಾಗಿದೆ. ಇದನ್ನು ಭಾರತದಲ್ಲಿ ಹಲವು ಬಾರಿ ಆಚರಿಸಿದ್ದು ೧೯೯೬ರಲ್ಲಿ ವಿಶ್ವಮಾನವ ಸಂದೇಶ ಸಾರಿದ ನಾಡಿನಲ್ಲಿ ವಿಶ್ವಶಾಂತಿಗೋಸ್ಕರ ಉತ್ತರ ಕನ್ನಡದ ಮುಂಡಗೋಡುವಿನಲ್ಲಿ ನಿರಾಶ್ರಿತರಾಗಿ ಬಂದು ನೆಲೆಸಿರುವ ಟಿಬೆಟಿಯನ್ನರು ಧರ್ಮಗುರು ದಲೈಲಾಮಾರ ನೇತೃತ್ವದಲ್ಲಿ 'ಕಾಲಚಕ್ರ ಮಹಾಯಜ್ಞ'ವನ್ನು ಬಹಳ ವಿಜೃಂಭಣೆಯಿಂದ ನೆರವೇರಿಸಿದರು. ಈ ಯಜ್ಞದಲ್ಲಿ ವಿಶ್ವದ ನಾನಾ ದೇಶಗಳಿಂದ ಸುಮಾರು ೧,೬೦,೦೦೦ಕ್ಕಿಂತಲೂ ಹೆಚ್ಚು ಜನರು ಆಗಮಿಸಿದ್ದರು. ಇದಕ್ಕೆ ಇಷ್ಟು ಮಹತ್ವ ಏಕೆ ಎಂಬುದನ್ನು ಪ್ರಶ್ನಿಸಲು ಹೊರಟರೆ ಕಾರಣ ಹೀಗಿದೆ. ಮಾನವನ ೬೦೦೦ ವರ್ಷ ಇತಿಹಾಸವನ್ನು ಅವಲೋಕಿಸಿದರೆ, ಯಾವುದೇ ಕ್ಷಣವು ಶಾಂತಿಯಿಂದ ಇಲ್ಲದೆ ಯುದ್ಧಮಯವಾಗಿರುವುದನ್ನು ಕಾಣುತ್ತೇವೆ. ಈ ಅವಧಿಯಲ್ಲಿ ಹದಿನಾರು ಸಾವಿರಕ್ಕಿಂತಲೂ ಹೆಚ್ಚು ಸಣ್ಣಪುಟ್ಟ ಒಂದು ವರ್ಷದ, ೩೦ ವರ್ಷದ ನೂರು ವರ್ಷದ

೧. ಬೈಲುಕುಪ್ಪೆ ಟಿಬೆಟಿಯನ್ನರು ಒಂದು ಸಾಂಸ್ಕೃತಿಕ ಅಧ್ಯಯನ: ಎನ್.ಆರ್.ಚಂದ್ರೇಗೌಡ, ಪುಟ. ೧೧೩.

ಯುದ್ಧಗಳನ್ನು ವಿಶ್ವರಾಷ್ಟ್ರಗಳು ಗುದ್ದಾಟಕ್ಕೆ ನಿಂತು ನಾಲ್ಕುನೂರು ಕೋಟಿಗಿಂತಲೂ ಹೆಚ್ಚು ಜನರು ತಮ್ಮ ಪ್ರಾಣವನ್ನು ಕಳೆದುಕೊಂಡಿರುತ್ತಾರೆ. ಇಷ್ಟಕ್ಕೆ ಸುಮ್ಮನಿರದೆ ಭೂಲೋಕದ ನಂದನವನದಂತೆ ನಿರ್ಮಾಣವಾಗಿದ್ದ ಅವಳಿಜವಳಿ ನಗರಗಳಾದ ಜಪಾನಿನ ನಾಗಸಾಕಿ ಮತ್ತು ಹಿರೋಶಿಮಾಗಳನ್ನು ೧೯೪೫ ಆಗಸ್ಟ್ ತಿಂಗಳಲ್ಲಿ ಧ್ವಂಸ ಮಾಡಲಾಯಿತು. ಇದರಿಂದ ಈ ಭೂಮಿಯಿಂದ ಈ ನಗರಗಳ ಕುರುಹುಗಳೇ ಮಂಗಮಾಯವಾಗಿವೆ. ಇಷ್ಟಾದರೂ ಮರ್ಕಟನಂತಿರುವ ಮಾನವನ ಮನಸ್ಸಿಗೆ ಕಡಿವಾಣ ಹಾಕಲಾರದೆ ಏಷ್ಯಾ, ಯೂರೋಪ್ ಹಾಗೂ ಮಧ್ಯ ಪ್ರಾಚ್ಯದಲ್ಲಿ ಸಂಭವಿಸುವ ನಿರಂತರ ಕಾಳಗವನ್ನು ದಿನಪತ್ರಿಕೆಗಳಲ್ಲಿ ನೋಡುತ್ತಿದ್ದೇವೆ.

ಮಾನವನ ಬಾಹ್ಯ ಆಂತರಿಕ ವಿಷಯಗಳ ಅರಿವು ಮತ್ತು ಕೊನೆಗೆ ಪರ್ಯಾಯ ಎಂದರೆ ಮೋಕ್ಷವನ್ನು ಪಡೆಯುವುದೆಂದು ಇದರರ್ಥ. ಇದರಿಂದಾಗಿ ಸುಖ ಶಾಂತಿಯ ತಾಣದ ದೈವಿಕ "ಶಾಂಬಾಲಾ"ದಲ್ಲಿ ಪುನರ್ಜನ್ಮ ಪಡೆಯುವುದರ ಮೂಲಕ ಜನ್ಮ ಸಾರ್ಥಕವಾಗುವುದೆಂದು ನಂಬಲಾಗಿದೆ. ಮಾನವನ ಸಂಪೂರ್ಣ ಜ್ಞಾನೋದಯವೇ ಅಂತಿಮ ಗುರಿ. ಹತ್ತು ದಿನಗಳ ಕಾಲ ಸತತ ಪೂಜೆ, ಮಂತ್ರಪಠಣ, ಉಪದೇಶ ತುಪ್ಪದ ದೀಪಗಳನ್ನು ಬೆಳಗುವುದರ ಮೂಲಕ ದೇವತೆಗಳನ್ನು ಆಹ್ವಾನಿಸಿ ಮಾನವನ ಮನಸ್ಸಿನಲ್ಲಿ ಶಾಂತಿ ಸ್ಥಾಪಿಸುವುದರ ಮೂಲಕ ವಿಶ್ವಶಾಂತಿ ಸ್ಥಾಪನೆಯೇ "ಕಾಲಚಕ್ರ" ಪೂಜಾ ವಿಧಿಯ ಮೂಲ ಉದ್ದೇಶ.

೧೫ನೇಯ ಶತಮಾನದಲ್ಲಿ ಪ್ರಾರಂಭವಾದ ದಲೈಲಾಮಾ ಪರಂಪರೆಯು ಈಗಲೂ ಮುಂದುವರಿಯುತ್ತಿದೆ. ಈತನನ್ನು ಟಿಬೆಟಿಯನ್ನರು ಈಶ್ವರನ ಪುನರವತಾರವೆಂದು ನಂಬಿದ್ದಾರೆ. ಈಗಿನ ದಲೈಲಾಮಾರವರು ೧೪ನೆಯವರಾಗಿದ್ದು "ಬೆಸ್ವಾನ್ ಡಚಿನ್‌ಗ್ರ್ಯಾರ್ಮಟೋ" ಎಂಬುದು ಇವರ ಹೆಸರು. ೧೯೪೦ರಲ್ಲಿ ದಲೈಲಾಮಾರಿಗೆ ಪಟ್ಟಾಭಿಷೇಕವಾಯಿತು. ೧೯೫೯ರಲ್ಲಿ ಚೀನಾದ ಕೆಂಪು ಸೈನ್ಯದ ದಾಳಿಗೆ ತುತ್ತಾದ ಟಿಬೆಟಿಯನ್ನರು ಪ್ರಪಂಚದ ನಾನಾ ಕಡೆ ಹೋಗಿ ಹಲವಾರು ದೇಶಗಳ ಆಶ್ರಯ ಪಡೆದಿದ್ದು ಭಾರತದ ಹಲವಾರು ಭಾಗಗಳಲ್ಲಿ ವಾಸವಿರುತ್ತಾರೆ.[೧]

ಉದಾಹರಣೆಗೆ: ಕೊಡಗು ಸಮೀಪ ಬರುವ ಮೈಸೂರು ಜಿಲ್ಲೆಯ ಬೈಲುಕುಪ್ಪೆಯಲ್ಲಿ ಇವರ ಕಾಲೋನಿಯನ್ನು ಕಾಣಬಹುದು. ದಲೈಲಾಮಾರವರು ಹಿಮಾಚಲ ಪ್ರದೇಶದ ಕಾಂಗ್ಡಾ ಪ್ರದೇಶದ ಧರ್ಮಶಾಲೆಯಲ್ಲಿ ನೆಲೆಸಿದ್ದಾರೆ. ಇವರು ನನ್ನ ನಾಡು, ನನ್ನ ಜನ, ಜ್ಞಾನ ಭಿಕ್ಷುವಿನ ಉನ್ಮಿಲನ ಮೊದಲಾದ ಕೃತಿಗಳನ್ನು ರಚಿಸಿರುತ್ತಾರೆ. ಪ್ರಪಂಚದ ಹಲವು ರಾಷ್ಟ್ರಗಳಿಂದ ಮನ್ನಣೆ ಪಡೆದು ೧೯೮೦ರಲ್ಲಿ ಭಾರತದಲ್ಲಿ ನೋಬೆಲ್ ಶಾಂತಿ

---

೧. ಬೈಲುಕುಪ್ಪೆ ಟಿಬೆಟಿಯನ್ನರು ಒಂದು ಸಾಂಸ್ಕೃತಿಕ ಅಧ್ಯಯನ : ಎನ್.ಆರ್.ಚಂದ್ರೇಗೌಡ, ಪುಟ. ೧೧೪.

ಪಾರಿತೋಷಕವನ್ನು ಪಡೆದುಕೊಂಡಿದ್ದಾರೆ. ಹಾಗೂ 'ಶಾಂತಿಮತ' ಎಂಬ ಬಿರುದಿನ ಮೂಲಕ ವಿಶ್ವಮನ್ನಣೆ ಪಡೆದಿದ್ದಾರೆ.

ತಾಯಿನಾಡು ಪರಕೀಯರ ಆಶ್ರಯದಲ್ಲಿದ್ದು ಆಗಾಗ ವಿಶ್ವಶಾಂತಿಗಾಗಿ ಕಾಲಚಕ್ರವೆಂಬ ಶಾಂತಿ ಸಮ್ಮೇಳನ ನಡೆಸುತ್ತಿರುವ ಟಿಬೆಟಿಯನ್ನರಿಗೆ ತಮ್ಮ ದೇಶವನ್ನು ಪುನಃ ಪಡೆಯುವಂತೆ ಪ್ರಬಲ ರಾಷ್ಟ್ರಗಳಾದ ಅಮೇರಿಕಾ, ಜಪಾನ್, ಫ್ರಾನ್ಸ್, ಇಂಗ್ಲೆಂಡ್, ಭಾರತ ದೇಶಗಳು ವಿಶ್ವಸಂಸ್ಥೆಯಲ್ಲಿ ಪ್ರಸ್ತಾಪಿಸುವುದು ಗಮನಾರ್ಹ ವಿಷಯವಾಗಿದೆ. ಬೌದ್ಧಧರ್ಮ ಅನುಯಾಯಿಗಳಾದ ಟಿಬೆಟಿಯನ್ನರು ಆಚರಿಸುತ್ತಿರುವ ಕಾಲಚಕ್ರವು ನೆಹರೂರವರ ಪಂಚಶೀಲತತ್ತ್ವಗಳಿಗೆ ಪೂರಕವಾಗಿ ಭಾರತದಲ್ಲಿ ಮಾತ್ರವಲ್ಲ ಇಡೀ ವಿಶ್ವದಲ್ಲೇ ಶಾಂತಿ ಸ್ಥಾಪನೆಯ ನಿರಂತರ ಪ್ರಯತ್ನವಾಗಿದೆ.[೧]

ಅಂತರರಾಷ್ಟ್ರೀಯ ಸಂಬಂಧವನ್ನು ನಿಯಂತ್ರಿಸಿ ಶಾಂತಿ ಸ್ಥಾಪನೆ ಮಾಡಲು ಪ್ರಚಾರ, ರಾಯಭಾರ, ಶಕ್ತಿ ಸಮತೋಲನ, ಸಾಮೂಹಿಕ ಭದ್ರತೆ, ನಿಶ್ಯಸ್ತ್ರೀಕರಣ, ಶಾಂತಿಯುತ ಇತ್ಯರ್ಥ, ಅಂತರರಾಷ್ಟ್ರೀಯ ಕಾನೂನಿನಂತೆ ಚಿಕಾಗೋದಲ್ಲಿ ನಡೆದ ವಿಶ್ವಧರ್ಮ ಸಮ್ಮೇಳನ ಈಗ ಜರುಗುತ್ತಿರುವ ಕಾಲಚಕ್ರದಂತೆ ಆಧ್ಯಾತ್ಮಿಕ ಮಹಾಯಜ್ಞಗಳು ಜರುಗುವುದರಿಂದ ಶಾಂತಿ ಸ್ಥಾಪನೆ ಸಾಧ್ಯವೆಂದು ನಂಬಲಾಗಿದೆ.

ಟಿಬೆಟಿಯನ್ನರು ದೀಪಾವಳಿ ಹಬ್ಬದಂತೆ ಸಾಂಗ್‌ಜೋಯಿ ಎಂಬ ಹಬ್ಬವನ್ನು ಆಚರಿಸುವರು. ಆ ದಿನ ಬೌದ್ಧ ವಿಹಾರಗಳ ಅಥವಾ ಮಠಗಳ ಮೇಲೆ ದೀಪಾಲಂಕಾರವನ್ನು ಮಾಡುತ್ತಾರೆ. ಪವಿತ್ರ ಗ್ರಂಥಗಳನ್ನು ಪಠಿಸುತ್ತಾರೆ. ಇನ್ನೂ ಕೆಲವು ಆಚಾರಗಳಲ್ಲಿ ಮೆನ್‌ಲಾಯ್ ಹಬ್ಬ, ದಲೈಲಾಮಾ ಹುಟ್ಟಿದ ಹಬ್ಬ, ಗುರುಪದ್ಮಸಂಭವನ ನೆನಪಿಗಾಗಿ "ವಿಶ್ವ ಪವಿತ್ರದಿನ" (Holy day)ವನ್ನು ದಲೈಲಾಮಾರಿಗೆ ನೋಬೆಲ್ ಶಾಂತಿ ಪುರಸ್ಕಾರ ದೊರೆತ ದಿನವನ್ನು "ವಿಶೇಷ ದಿನ" (Specialday)ವನ್ನಾಗಿಯೂ ಆಚರಿಸುತ್ತಾರೆ. ಹೀಗೆ ಟಿಬೆಟಿಯನ್ನರು ತಮ್ಮದೇ ಆದ ಕೆಲವೊಂದು ಆಚಾರಗಳನ್ನು ರೂಢಿಸಿಕೊಂಡಿದ್ದಾರೆ.

**ನಾಮ್‌ಡ್ರೋಲಿಂಗ್ ಬೌದ್ಧವಿಹಾರದ ಧಾರ್ಮಿಕ ಸಂಪ್ರದಾಯಗಳು**

೨೫೪೭ ವರ್ಷಗಳ ಹಿಂದೆ ಬೌದ್ಧಧರ್ಮ ಭಗವಾನ್ ಬುದ್ಧರಿಂದ ಸ್ಥಾಪಿಸಲ್ಪಟ್ಟಿತು.[೨] ಭಗವಾನ್ ಬುದ್ಧರ ವಿವಿಧ ಬೋಧನೆಗಳು ನಮ್ಮ ಮಾನಸಿಕ

---

೧. ಬೈಲುಕುಪ್ಪೆ ಟಿಬೆಟಿಯನ್ನರು ಒಂದು ಸಾಂಸ್ಕೃತಿಕ ಅಧ್ಯಯನ : ಎನ್.ಆರ್.ಚಂದ್ರೇಗೌಡ, ಪುಟ.೧೧೫.

೨. ಸ್ವರ್ಣದೇವಸ್ಥಾನ (Golden Temples) ಕನ್ನಡಕ್ಕೆ ಅನುವಾದ – ಡಿ.ಎನ್.ಪುರುಷೋತ್ತಮ ರಾವ್, ಪುಟ. ೬೩.

ಗ್ರಹಿಕೆಗೆ ಮೀರುವಂತಹವುಗಳಾದರೂ ಅವರ ಬೋಧನೆಗಳ ಅಂತರಾಳವನ್ನು ಎರಡು ಭಾಗಗಳಾಗಿ ಸಂಕ್ಷೇಪಿಸಬಹುದಾಗಿದೆ. ಅವುಗಳು ಯಾವುವೆಂದರೆ, ಪರಸ್ಪರ ಆಶ್ರಿತ ಜೀವನಕ್ರಿಯೆ ಮತ್ತು ಅಹಿಂಸೆಯ ನಡತೆ. ಈ ಬೋಧನೆಗಳು ಅನೇಕ ದೇಶಗಳಿಗೆ ಹರಡಿದವು. ಟಿಬೆಟ್ ದೇಶದಲ್ಲಿ ಪ್ರವರ್ಧಮಾನಕ್ಕೆ ಬಂದ ಭಗವಾನ್ ಬುದ್ಧರ ಬೋಧನೆಗಳೆಲ್ಲ ಸೂತ್ರ ಮತ್ತು ತಂತ್ರಗಳ ಬೋಧನೆಯನ್ನು ಪರಿಪೂರ್ಣವಾಗಿ ಹೊಂದಿರುವುದನ್ನು ನಾವು ಕಾಣಬಹುದಾಗಿದೆ.

ವಿವಿಧ ಕಾಲದ ಬೌದ್ಧಧರ್ಮದ ಭಾಷಾಂತರದ ಕಾರಣದಿಂದ ಟಿಬೆಟ್‌ನಲ್ಲಿ ಎರಡು ಪರಂಪರೆಗಳು ಅಭಿವೃದ್ಧಿಗೊಂಡವು. ಅವುಗಳು ಯಾವುವೆಂದರೆ ಮುಂಚಿನ ಪ್ರಾಚೀನ ಭಾಷಾಂತರ ಶಾಲೆಯಾದ ಜ್ಞಾಗ್‌ಗ್ಯುರ್‌ಜ್ಞಿಂಗ್‌ಮ ಮತ್ತು ನಂತರದ ಭಾಷಾಂತರದ ಶಾಲೆಯಾದ ಚಿಗ್ಯುರ್‌ಸರ್‌ಮ. ಟಿಬೆಟ್‌ನ ಬೌದ್ಧಧರ್ಮದಲ್ಲಿ ಪ್ರಮುಖವಾಗಿ ನಾಲ್ಕು ಸಂಪ್ರದಾಯಗಳಿವೆ. ಅವುಗಳು ಅರ್ಥವಿವರಣೆ ಮಾಡುವಲ್ಲಿ ಮತ್ತು ಆಚರಣೆಯಲ್ಲಿ ಭಿನ್ನವಾದರೂ ಬುದ್ಧರ ತತ್ತ್ವಬೋಧನೆಯಲ್ಲಿ ಒಂದೇ ಆಗಿವೆ.

ಈ ಬೌದ್ಧವಿಹಾರವು ಜ್ಞಿಂಗ್‌ಮ ಸಂಪ್ರದಾಯವನ್ನು ಆಚರಿಸುತ್ತಿದೆ. ಜ್ಞಿಂಗ್‌ಮ ಪರಂಪರೆಯಲ್ಲಿ ಆರು ಬೌದ್ಧವಿಹಾರಗಳಿವೆ.[೧] ಅವುಗಳಲ್ಲಿ ಈ ಬೌದ್ಧವಿಹಾರ ಪಾಲ್ಯುಲ್ ಪರಂಪರೆಯನ್ನು ಪ್ರತಿನಿಧಿಸುತ್ತದೆ. ಪರಮಪೂಜ್ಯ ಪೆನೋರ್‌ರಿನ್‌ಪೋಚೆ ಪಾಲ್ಯುಲ್ ಪೀಳಿಗೆಯ ಹನ್ನೊಂದನೆಯ ಪೀಠವನ್ನು ಅಲಂಕರಿಸಿದ್ದಾರೆ.

**ವಾರ್ಷಿಕ ಧಾರ್ಮಿಕ ಆಚರಣೆಗಳು**

| ದಿನ ಸಾಮಾನ್ಯ ಕ್ಯಾಲಂಡರಿನಂತೆ | | ದಿನ ಟಿಬೆಟ್‌ನ ಕ್ಯಾಲಂಡರಿನಂತೆ | ಕಾರ್ಯಕ್ರಮದ ಹೆಸರು |
|---|---|---|---|
| ೧. | ಫೆಬ್ರವರಿ/ಮಾರ್ಚ್ | ಮೊದಲನೆಯ ತಿಂಗಳು ೧ರಿಂದ ೩ ದಿನ[೨] | ಟಿಬೆಟ್‌ನ ಹೊಸ ವರ್ಷದ ಆಚರಣೆ. |
| ೨. | ಫೆಬ್ರವರಿ/ಮಾರ್ಚ್ | ಮೊದಲನೆಯ ತಿಂಗಳು ೮ರಿಂದ ೧೫ ದಿನ | ಪಾಲ್‌ಯುಲ್ ಡ್ರುಬ್‌ಚಿನ್ ಪಾಲ್‌ಯುಲ್ ಸಂಪ್ರದಾಯದಂತೆ ಮಹಾಸಾಧನೆ ಮಾಡಿದ ಗುಂಪಿನಿಂದ ಶಾಸ್ತ್ರೋಕ್ತ ನೃತ್ಯ. |
| ೩. | ಫೆಬ್ರವರಿ/ಮಾರ್ಚ್ | ಮೊದಲನೆಯ ತಿಂಗಳು ೧೦ನೆಯ ದಿನ | ಗುರು ಪದ್ಮಸಂಭವ ಅವರ ೧೮೦ ಅಡಿಯ ಬೃಹತ್ ಥಂಖ ಚಿತ್ರದ ಪ್ರದರ್ಶನ. |

೧. ಸ್ವರ್ಣದೇವಸ್ಥಾನ (Golden Temples) ಕನ್ನಡಕ್ಕೆ ಅನುವಾದ – ಡಿ.ಎನ್.ಪುರುಷೋತ್ತಮ ರಾವ್, ಪುಟ. ೬೪.

೨. ಅದೇ., ಪುಟ. ೯೬.

| | | | |
|---|---|---|---|
| ೪. | ಫೆಬ್ರವರಿ/ಮಾರ್ಚ್ | ಮೊದಲನೆಯ ತಿಂಗಳು ೧೫ನೆಯ ದಿನ | ಬುದ್ಧ ಅಮಿತಾಯುಸ್‌ರವರ ಬೃಹತ್ ೧೮೦ ಅಡಿಯ ಥಂಖ ಚಿತ್ರದ ಪ್ರದರ್ಶನ |
| ೫. | ಫೆಬ್ರವರಿ/ಮಾರ್ಚ್ | ಮೊದಲನೆಯ ತಿಂಗಳ ಮತ್ತು ಎರಡನೆಯ ತಿಂಗಳ ೧೭ನೆಯ ದಿನ | ಒಂದು ತಿಂಗಳ ತೀವ್ರ ಧ್ಯಾನಾಚರಣೆ. |
| ೬. | ಏಪ್ರಿಲ್ | ಎರಡನೆಯ ತಿಂಗಳ ೧೦ನೆಯ ದಿನ.[1] | NNI ಪ್ರಾಥಮಿಕ ಶಾಲಾ ಶೈಕ್ಷಣಿಕ ವರ್ಷಾರಂಭ |
| ೭. | ಮೇ/ಜೂನ್ | ೪ನೇ ತಿಂಗಳ ೮ರಿಂದ ೧೫ರವರೆಗೆ | ಕಾಮ ದ್ರಬ್ ಚೆನ್ ಕಾಮಬೋಧನೆಗಳಲ್ಲಿ ಮಹಾಸಾಧನೆ ಮಾಡಿದ ಗುಂಪಿನಿಂದ ಶಾಸ್ತ್ರೋಕ್ತ ನೃತ್ಯ |
| ೮. | ಮೇ/ಜೂನ್ | ೪ನೇ ತಿಂಗಳ ೧೫ನೆಯ ದಿನ | ಬುದ್ಧಶಾಕ್ಯಮುನಿಯರ ೧೮೦ ಅಡಿಯ ಬೃಹತ್ ಥಂಖ ಚಿತ್ರದ ಪ್ರದರ್ಶನ. |
| ೯. | ಮೇ/ಜೂನ್ | ೪ನೇ ತಿಂಗಳ ೨೯ನೆಯ ದಿನ | ಜಾಮ್‌ಗ್ಯಾನ್ ಮಿಫಾಮ್ ನಾಮ್‌ಗ್ಯಲ್‌ಗ್ಯಾತ್ಸೊರವರು ಪರಿನಿರ್ವಾಣ ಹೊಂದಿದ ಸ್ಮರಣೋತ್ಸವದ ದಿನಾಚರಣೆ |
| ೧೦. | ಆಗಸ್ಟ್ ೫ನೇ | ತಿಂಗಳ ೧೫ನೆಯ ದಿನ | ದಿನ ವರ್ಷಕಾಲದ ಅಚಲ ವ್ರತಾಚರಣೆ |
| ೧೧. | ಸೆಪ್ಟೆಂಬರ್ | ೭ನೇ ತಿಂಗಳ ೨೯ನೆಯ ದಿನ | ಗ್ಯಾಗ್ಯೆ ವರ್ಷಕಾಲದ ಅಚಲ ವ್ರತಾಚರಣೆಯ ನಿರ್ಬಂಧನೆಗಳನ್ನು ಹಿಂತೆಗೆದುಕೊಳ್ಳುವ ಆಚರಣೆ. |
| ೧೨. | ಡಿಸೆಂಬರ್ | ೧೦ನೇ ತಿಂಗಳ ೨೫ನೆಯ ದಿನದಿಂದ ೧೧ನೇ ತಿಂಗಳ ೧೫ನೇ ದಿನದವರೆಗೆ[2] | NNIದ ವಾರ್ಷಿಕ ಪರೀಕ್ಷೆ |
| ೧೩. | ಡಿಸೆಂಬರ್ | ೧೧ನೇ ತಿಂಗಳ ೧೬ನೆಯ ದಿನ | NNIದ ಎರಡೂವರೆ ತಿಂಗಳ ರಜೆಯ ಆರಂಭ |
| ೧೪. | ಜನವರಿ | ೧೨ನೇ ತಿಂಗಳ ೧ರಿಂದ ೧೦ನೆಯ ದಿನದವರೆಗೆ | ಜ್ಞಿಂಗ್ ಮ ಮೋನೆಲಮ್ ಚೆನ್ ಮೊಬುದ್ಧಗಯದಲ್ಲಿ ಬೃಹತ್ ಪ್ರಾರ್ಥನೆಯ ಹಬ್ಬದಲ್ಲಿ ಪಾಲ್ಗೊಳ್ಳುವಿಕೆ. |

೧. ಸ್ವರ್ಣದೇವಸ್ಥಾನ (Golden Temples) ಕನ್ನಡಕ್ಕೆ ಅನುವಾದ – ಡಿ.ಎನ್.ಪುರುಷೋತ್ತಮ ರಾವ್, ಪುಟ. ೯೭.

೨. ಅದೇ., ಪುಟ. ೯೮.

| | | | |
|---|---|---|---|
| ೧೫. | ಜನವರಿ | ೧೨ನೇ ತಿಂಗಳ ೧೮ನೆಯ ದಿನ | ಲಾಂಗ್ ಚೆನ್ ರಾಬ್ ಜಂಪರ ಪರಿನಿರ್ವಾಣದ ಸ್ಮರಣೋತ್ಸವದ ಆಚರಣೆ. |
| ೧೬. | ಫೆಬ್ರವರಿ | ೧೨ನೇ ತಿಂಗಳ ೨೫ರಿಂದ ೨೯ರವರೆಗೆ | ಗುಟೋರ್ ಅಡಚಣೆಗಳನ್ನು ಶಾಂತಿಗೊಳಿಸುವ ತಾಂತ್ರಿಕ ಶಾಸ್ತ್ರೋಕ್ತ ಕಾರ್ಯಕ್ರಮ |

## ಅಧ್ಯಾಯ – ೬

# ಟಿಬೆಟಿಯನ್ನರ ಭಾಷೆ ಮತ್ತು ಲಿಪಿ ಹಾಗೂ ಅವರ ಇಂದಿನ ಪರಿಸ್ಥಿತಿ

ಪ್ರಪಂಚದ ಇತರೇ ಜನರು ಹೊಂದಿರುವಂತೆ ಟಿಬೆಟಿಯನ್ನರೂ ಕೂಡ ತಮ್ಮದೇ ಆದ ಲಿಪಿ ಮತ್ತು ಭಾಷೆಯನ್ನು ಕಂಡುಕೊಂಡಿದ್ದಾರೆ. ಸುಮಾರು ೧೧೮೪ರ ತನಕ ಯಾವುದೇ ರೀತಿಯ ಬರವಣಿಗೆಯನ್ನು ಟಿಬೆಟಿಯನ್ನರು ಹೊಂದಿರಲಿಲ್ಲವೆಂದು ಟಿಬೆಟ್ ಇತಿಹಾಸಕಾರರು ಮತ್ತು ಚಿಂತಕರು ಹೇಳುತ್ತಾರೆ.[೧] ಕ್ರಿ.ಶ. ೬೪೦ರಲ್ಲಿ 'ಸ್ರಾಂಗ್‌ಸನ್ ಗ್ಯಾಂಪೋ' ಎಂಬ ರಾಜನು ಅಧಿಕಾರಕ್ಕೆ ಬಂದ ನಂತರ ತನ್ನ ಮಂತ್ರಿಯಾಗಿದ್ದ ತೋಮ್ಮಿಸಂಬೋಟ ಮತ್ತು ೧೬ ಜನ ಶಿಷ್ಯರನ್ನು ಹೊಸ ಭಾಷೆಯೊಂದನ್ನು ಕಲಿಯಲು ಭಾರತಕ್ಕೆ ಕಳುಹಿಸಿದನು. ತೋಮ್ಮಿಸಂಬೋಟನು ಭಾರತದ ಭಾಷೆಯನ್ನು ದೇವನಾಗರಿ ಭಾಷೆ ವ್ಯಾಕರಣದ ಆಧಾರದ ಮೇಲೆ ಹೊಸದೊಂದು ಭಾಷೆಯನ್ನು ರಚಿಸಿದನು. ಇದರಲ್ಲಿ ೩೦ ಅಕ್ಷರಗಳಿದ್ದು ಹಿಂದಿ ಭಾಷೆಯನ್ನು ಹೋಲುತ್ತದೆ. ಭಾರತದ ಹಲವಾರು ಧಾರ್ಮಿಕ ಭಾಷೆಗಳನ್ನು ಟಿಬೆಟ್ ಭಾಷೆಗೆ ಭಾಷಾಂತರಿಸಿದನು.

**ಲಿಪಿ**[೨]

| | | | | | |
|---|---|---|---|---|---|
| ಕ | ཀ་ | ನ | ན་ | ಜ | ཟ་ |
| ಖ | ཁ་ | ಪ | པ་ | ಎ | འ་ |
| ಗ | ག་ | ಫ | ཕ་ | ಯ | ཡ་ |
| ಘ | ང་ | ಬ | བ་ | ರ | ར་ |
| ಚ | ཅ་ | ಮ | མ་ | ಲ | - ལ་ |
| ಛ | ཆ་ | ಟ್ಸಜ | ཙ་ | ಶ | - ཤ་ |
| ಜ | ཇ་ | ಟ್ಸ | - ཚ་ | ಸ | - ས་ |
| ನ್ಯಾ | ཉ་ | ಡ್ಸ | - ཛ་ | ಹ | ཧ་ |
| ತ | ཏ་ | ವ | ཝ་ | ಅ | ཨ་ |
| ಥ | ཐ་ | ಜ | ཞ་ | | |
| ದ | ད་ | ಮ | [illegible] | | |

೧. ಪ್ರಪಂಚದ ಮೇಲ್ಛಾವಣಿ ಟಿಬೆಟ್, ಲೇಖಕರು: ಎಚ್.ಸಿ.ಲೋಹಿತಾಶ್ವ, ಪುಟ. ೬೨.

೨. ಅದೇ, ಪುಟ. ೬೩.

## ಬೈಲುಕುಪ್ಪೆ ಟಿಬೆಟಿಯನ್ನರ ಇಂದಿನ ಸ್ಥಿತಿಗತಿ

ಟಿಬೆಟ್ ಒಂದು ಸ್ವತಂತ್ರ ಸಾರ್ವಭೌಮ ರಾಷ್ಟ್ರವಾಗಿತ್ತು ಎನ್ನುವುದಕ್ಕೆ ಹಲವಾರು ಶತಮಾನಗಳಿಂದ ಟಿಬೆಟ್ ಚೀನಾ ನಡುವೆ ಏರ್ಪಟ್ಟಿರುವ ಹಲವಾರು ಒಡಂಬಡಿಕೆಗಳಲ್ಲಿ ಜ್ವಲಂತ ಸಾಕ್ಷಿ ಇವುಗಳಲ್ಲಿ ಮುಖ್ಯವಾಗಿ ಲಾಸಾ ನಗರದಲ್ಲಿರುವ ಪೊಲಾಟ ಅರಮನೆಯ ಮುಂದಿರುವ ಶಿಲಾಸ್ತಂಭದಲ್ಲಿ ಕೆತ್ತಿರುವ ಶಿಲಾಶಾಸನ ೧೯೪೬ರ ೪ನೇ ಜೆಸಿವಾ ಒಪ್ಪಂದ ಹಾಗೂ ಸಿಮ್ಲಾ ಒಪ್ಪಂದಗಳೇ ಪ್ರಮುಖ ದಾಖಲೆಗಳಾಗಿವೆ. ಆದರೂ ಈ ಎಲ್ಲ ಒಡಂಬಡಿಕೆಗಳನ್ನು ತಳ್ಳಿ ಹಾಕಿದ ಚೀನಾವು ೧೯೪೮ರಲ್ಲಿ ಟಿಬೆಟ್‌ನ್ನು ಆಕ್ರಮಿಸಲು ಪ್ರಾರಂಭಿಸಿ ೧೯೫೯ರ ಮಾರ್ಚ್‌ನಲ್ಲಿ ಟಿಬೆಟ್‌ನ ಉತ್ತರ ಪೂರ್ವ ದಿಕ್ಕಿನಿಂದ ಧಾವಿಸಿ ಲಾಸಾ ನಗರವನ್ನು ಮುತ್ತಿಗೆ ಹಾಕಿದರು. ಆತ್ಮರಕ್ಷಣೆಗಾಗಿ ೧೪ನೇ ದಲೈಲಾಮಾ ಹಾಗೂ ೯,೦೦೦ ಟಿಬೆಟಿಯನ್ನರು ದೇಶದಿಂದ ಬಂದರು. ೧೯೫೯ರಿಂದ ಇಲ್ಲಿಯವರೆಗೆ ಅಮ್ಯೋಬಾಮಾ ಮತ್ತು ಯಸಂಗ ಮೂರು ಪ್ರಾಂತ್ಯಗಳನ್ನು ಚೀನಿಯರು ಆಶ್ರಮಿಸಿದ್ದಾರೆ.[೧]

ಆಶ್ರಮಿತ ಟಿಬೆಟ್‌ನಲ್ಲಿ ಚೀನೀಯರ ಸಂಖ್ಯೆ ದಿನೇ ದಿನೇ ತೀವ್ರಗತಿಯಲ್ಲಿ ಹೆಚ್ಚುತ್ತಿದ್ದು ಟಿಬೆಟ್‌ಯನ್ನರಿಗಿಂತ ಚೀನೀಯರ ಸಂಖ್ಯೆ ಜಾಸ್ತಿಯಾಗುತ್ತಿದೆ. ೧೯೮೬ರ ಹೂಲ್ಲೆಗೆ ಅಮ್ಡೋ ಪ್ರಾಂತ್ಯದಲ್ಲಿ ೩.೩. ಮಿಲಿಯನ್ ಬಾಮ್‌ನಲ್ಲಿ ೨ ಮಿಲಿಯನ್ ಯು ಸಂಗನಲ್ಲಿ ೧.೭ ಮಿಲಿಯನ್ ಒಟ್ಟಾರೆ ಮೂರು ಪ್ರದೇಶದಲ್ಲಿ ಸುಮಾರು ೬.೨ ಮಿಲಿಯನ್ ಚೀನೀಯರು ವಾಸ ಮಾಡುತ್ತಿದ್ದಾರೆ. ಪ್ರಸ್ತುತ ಸಂದರ್ಭದಲ್ಲಿ ಟಿಬೆಟ್‌ನ ಪೂರ್ವಭಾಗದಲ್ಲಂತೂ ಟಿಬೆಟಿಯನ್ನರ ಸಂತಾನವೇ ಲೆಕ್ಕಾಚಾರದ ಪ್ರಕಾರ ೨.೫ ಮಿಲಿಯನ್ ಚೀನೀಯರ ೭,೫೦,೦೦೦ ಡಿಜಿವಿಯನ್ನರು ವಾಸಿಸುತ್ತಿದ್ದಾರೆ. ಮಧ್ಯ ಮತ್ತು ಪಶ್ಚಿಮ ಟಿಬೆಟಿನಲ್ಲಿ ಕೂಡ ಟಿಬೆಟಿಯನ್ನರ ಸಂಖ್ಯೆ ದಿನೇ ದಿನೇ ಕಡಿಮೆಯಾಗುತ್ತಿದೆ. ಒಟ್ಟಾರೆ ಟಿಬೆಟ್ ದೇಶದಲ್ಲಿ ೭೫ ಮಿಲಿಯನ್ ಚೀನೀಯರು ವಾಸ ಮಾಡುತ್ತಿದ್ದಾರೆ. ಆದರೆ ಕೇವಲ ೧.೯ ಮಿಲಿಯನ್ ಟಿಬೆಟಿಯನ್ನರು ಸ್ವದೇಶದಲ್ಲಿದ್ದಾರೆ. ಭಾರತದಲ್ಲಿ ೧,೫೦,೦೦೦ ವಿಶ್ವದ ವಿವಿಧ ದೇಶಗಳಲ್ಲಿ ೬ ಮಿಲಿಯನ್ ಟಿಬೆಟಿಯನ್ನರಿದ್ದಾರೆ. ಸಂತಾನ ನಿಯಂತ್ರಣ ಕಾಯ್ದೆ ಎಂದರೆ ಒಂದು ಕುಟುಂಬಕ್ಕೆ ಒಂದು ಮಗು ಎನ್ನುವ ಕಾಯ್ದೆಯನ್ನು ಜಾರಿಗೆ ತಂದಿದ್ದು ಬಲವಂತವಾಗಿ ಹೆಣ್ಣು ಮಕ್ಕಳಿಗೆ ಜನನ ನಿಯಂತ್ರಣ ಶಸ್ತ್ರಕ್ರಿಯೆಯನ್ನು ಗರ್ಭವತಿಯಾಗಿ ಗರ್ಭಪಾತವನ್ನು ಮಾಡಿಸುತ್ತಿದ್ದಾರೆ.

---

೧. ಪ್ರಪಂಚದ ಮೇಲ್ಛಾವಣಿ ಟಿಬೆಟ್, ಲೇಖಕರು: ಎಚ್.ಸಿ.ಲೋಹಿತಾಶ್ವ, ಪುಟ. ೬೪.

೧೯೬೦ರಲ್ಲಿ ಪ್ರಧಾನಿಯಾಗಿದ್ದ ಪಂಡಿತ್ ನೆಹರೂರವರು ನಿರಾಶ್ರಿತರಾಗಿದ್ದ ಟಿಬೆಟಿಯನ್ನರಿಗೆ ಆಶ್ರಯ ನೀಡಿದರು. ಅಲ್ಲದೆ ಪುನರ್ವಸತಿಯ ವ್ಯವಸ್ಥೆ ಮಾಡಲಾಯಿತು. ಇದರಿಂದಾಗಿ ಟಿಬೆಟಿಯನ್ನರು ಪಿರಿಯಾಪಟ್ಟಣ ತಾಲ್ಲೂಕಿನ ಬೈಲುಕುಪ್ಪೆಯಲ್ಲಿ ನೆಲೆಸಿದರು. ಅಲ್ಲಿ ಹೇರಳವಾಗಿ ಬೆಳೆದಿದ್ದ ದೊಡ್ಡ ಹರವೆ ಬಳಿಯ ಅರಣ್ಯ ನಾಶ ಮಾಡಿ ನಗರ ನಿರ್ಮಾಣ ಮಾಡಿದರು. ಇದು ಆ ನಗರದ ಭವ್ಯತೆ ದೇಶ ಉದ್ದೇಶಗಳಿಂದ ಪ್ರವಾಸಿಗರನ್ನು ಕೈಬೀಸಿ ಕರೆಯುತ್ತಿದೆ. ಜಗತ್ತಿನ ಶ್ರೇಷ್ಠ ಪ್ರವಾಸಿ ತಾಣಗಳಲ್ಲಿ ಒಂದಾದ ಬೈಲುಕುಪ್ಪೆಯ ಪದ್ಮಸಂಭವ ಬೌದ್ಧವಿಹಾರ ಕೇಂದ್ರ ಕಂಡುಬರುತ್ತದೆ. ನಿರಾಶ್ರಿತರಿಗೆ ಬಂದು ತಮ್ಮ ನೆಲೆಯನ್ನು ಭದ್ರಪಡಿಸಿಕೊಂಡು ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ತಮ್ಮ ಹಿರಿಮೆಯನ್ನು ಭಾರತದಲ್ಲಿ ಸಾರಿದ ಕೀರ್ತಿ ಸಲ್ಲುತ್ತದೆ. ಬೈಲುಕುಪ್ಪೆಯಲ್ಲಿ ೨ ಶಿಬಿರಗಳಿದ್ದು ಇಲ್ಲಿ ಒಟ್ಟಾರೆ ೧೫ ಸಾವಿರ ಜನಸಂಖ್ಯೆಯನ್ನು ಹೊಂದಿದೆ. ಅಲ್ಲದೇ ೨೨ ಗ್ರಾಮಗಳಿಂದ ಕೂಡಿದ ಇದರಲ್ಲಿ ೪ ಮಠಗಳನ್ನು ಒಳಗೊಂಡಿದೆ. ಇವುಗಳಿಂದ ಕೂಡಿದ ಬೈಲುಕುಪ್ಪೆ ಒಂದು ಸುಂದರ ಪ್ರವಾಸಿ ತಾಣವಾಗಿ ಮಹತ್ವ ಪಡೆದಿದೆ.[೧]

ಬೈಲುಕುಪ್ಪೆ ಸಾಂಸ್ಕೃತಿಕವಾಗಿ ಮಹತ್ವ ಪಡೆದಿದೆ. ಆದರೆ ಅದರ ಹಿನ್ನೆಲೆ ನೋವಿನಿಂದ ಕೂಡಿದೆ. ಒಂದನ್ನು ಪಡೆಯಬೇಕೆಂದರೆ ಮತ್ತೊಂದನ್ನು ತ್ಯಜಿಸಬೇಕಾಗುತ್ತದೆ. ಅದರಂತೆ ಟಿಬೆಟಿಯನ್ನರು ಇಲ್ಲಿ ನೆಲೆಸಿದ್ದ ರೈತರನ್ನು ತಮ್ಮ ಕಾಲ್ತುಳಿತಕ್ಕೆ ಸಿಕ್ಕಿಸಿಕೊಂಡು ತಮ್ಮ ಭವ್ಯ ಕಟ್ಟಡವನ್ನು ನಿರ್ಮಿಸಿದ್ದಾರೆ. ಅಂದರೆ ಅಲ್ಲಿನ ಅರಣ್ಯ ಸಂಪತ್ತಿನ ನಾಶ ರೈತರಿಗೆ ದುಬಾರಿ ಕೂಲಿ ಹಾಗೂ ಜಮೀನು ವಶಪಡಿಸಿಕೊಂಡು ತಮ್ಮ ಹಿಡಿತದಲ್ಲಿ ಇಟ್ಟುಕೊಂಡಿದ್ದಾರೆ. ಅರಿಯದ ರೈತರು ಅವರ ಮಾತಿಗೆ ಮರುಳಾಗಿ ಇಂದೂ ಸಹ ಟಿಬೆಟಿಯನ್ನರ ಜೀತದಾಳುಗಳಾಗಿ ದುಡಿಯುತ್ತಿದ್ದಾರೆ. ಇಷ್ಟೇ ಅಲ್ಲದೆ ಭಾರತದ ಪ್ರಜೆಯಾಗಬೇಕು, ಪೌರತ್ವ ಪಡೆಯಬೇಕು ಎಂಬ ಛಲದಿಂದ ಭಾರತೀಯ ಸ್ತ್ರೀ ಹಾಗೂ ಟಿಬೆಟಿಯನ್ ಪುರುಷ ಭಾರತೀಯ ಪುರುಷ ಹಾಗೂ ಟಿಬೆಟಿಯನ್ ಸ್ತ್ರೀಯರೊಡನೆ ವಿವಾಹವೂ ಕೂಡ ನಡೆಯುತ್ತಿದೆ. ಇದರಿಂದಾಗಿ ಭಾರತದ ಪೌರತ್ವ ಪಡೆಯುವ ಹಂಬಲ ಅವರದ್ದಾಗಿದೆ.

ಸಾಮಾಜಿಕವಾಗಿಯೂ ಟಿಬೆಟಿಯನ್ನರ ದೌರ್ಜನ್ಯ ಸಾಮಾನ್ಯವಾಗಿ ಕಂಡುಬರುತ್ತದೆ. ಇತ್ತೀಚೆಗೆ ಭಾರತೀಯ ನಾಗರೀಕರ ಮೇಲೆ ದೌರ್ಜನ್ಯ ನಡೆಸುತ್ತಿರುವ ಪ್ರಕ್ರಿಯೆ ಹಾಗೂ ತಮ್ಮ ಹಿಡಿತದಲ್ಲಿಡಬೇಕೆಂಬ ಹುಮ್ಮಸ್ಸು ಟಿಬೆಟಿಯನ್ನರಲ್ಲಿರುವುದನ್ನು ಕಾಣಬಹುದಾಗಿದೆ. ಆದರೂ ಅವರಲ್ಲಿನ ಧಾರ್ಮಿಕ ಶ್ರದ್ಧೆ, ಸಾಂಸ್ಕೃತಿಕತೆಯನ್ನು ಗಮನಿಸಿದಾಗ ಅವರಲ್ಲಿನ ಶ್ರೇಷ್ಠತೆ ಅರಿವಾಗುತ್ತದೆ.

---

೧. ಪ್ರಪಂಚದ ಮೇಲ್ಚಾವಣಿ ಟಿಬೆಟ್, ಲೇಖಕರು: ಎಚ್‌ಸಿ.ಲೋಹಿತಾಶ್ವ, ಪುಟ. ೬೫.

ಮುಳ್ಳಿನ ನಡುವೆ ಗುಲಾಬಿಯ ಸುವಾಸನೆ ಭರಿತವಾದ, ಸುಂದರವಾದ ಹೂ ಕೂಡ ಇರುತ್ತದೆ ಎಂಬುದನ್ನು ಗಮನಿಸಿದಾಗ ಕೆಟ್ಟವರೊಳಗೂ ಒಳ್ಳೆಯವರನ್ನು ಕಾಣವುದು ಸಹಜವಾದುದು. ಟಿಬೆಟಿಯನ್ನರಿಂದ ಏನೇ ತೊಂದರೆ ನಷ್ಟ ಸಂಭವಿಸಿದ್ದರೂ ಇಂದು ಅವರ ಶ್ರೇಷ್ಠ ಹಿರಿಮೆ, ಸಾಧನೆ ಮೆಚ್ಚುವಂತದ್ದಾಗಿದೆ.[೧]

**ಭಾರತವನ್ನು ಕುರಿತು ನಿಮ್ಮ ಅಭಿಪ್ರಾಯವೇನು?** ನಮಗೆ ಇಬ್ಬರು ತಾಯಂದಿರು ಹೆತ್ತ ತಾಯಿ ಟಿಬೆಟ್ ಆದರೆ ಸಾಕು ತಾಯಿ ಭಾರತ. ನಾವು ಭಾರತಮಾತೆಯ ದತ್ತು ಮಕ್ಕಳು.

**ಭಾರತ ಸರ್ಕಾರದಿಂದ ಈಗ ನಿಮಗೆ ದೊರೆಯುತ್ತಿರುವ ಸೌಲಭ್ಯಗಳೇನು?**

ಕಳೆದ ೫೦ ವರ್ಷದಿಂದ ನಮ್ಮ ಧರ್ಮ, ಸಂಸ್ಕೃತಿಯನ್ನು ಉಳಿಸಿ ಬೆಳೆಸಲು ಸಹಾಯ ಮಾಡಿದೆ. ಇದಕ್ಕೆ ವಂದನೆಯನ್ನು ತಿಳಿಸುತ್ತೇವೆ. ಭಾರತವನ್ನು ಬಿಟ್ಟು ಬೇರೆ ಪ್ರದೇಶದಲ್ಲಿ ವಾಸ ಮಾಡುತ್ತಿರುವ ನಮ್ಮ ಜನರಿಗೆ ಈ ಅವಕಾಶ ದೊರೆತಿಲ್ಲ.

**ಕಳೆದ ೫೦ ವರ್ಷದ ಭಾರತಕ್ಕೆ ನಿಮ್ಮ ಕೊಡುಗೆಗಳೇನು?**

೫೦ ವರ್ಷದ ಹಿಂದೆ ಇದ್ದ ಒಂದು ಕಾಡಿನ ಪ್ರದೇಶ ಈಗ "ಮಿನಿ ಟಿಬೆಟ್" ಎಂದು ಪ್ರಸಿದ್ಧಿಯಾಗಿದೆ. ಒಂದು ಪ್ರಮುಖ ಪ್ರವಾಸಿ ತಾಣವಾಗಿದೆ. ನಮ್ಮ ಪ್ರದೇಶಗಳನ್ನು ಸುಂದರವಾಗಿ ಇಟ್ಟುಕೊಳ್ಳುವುದು ನಮ್ಮ ಉದ್ದೇಶ.

**ಮುಂದೆ ನಿಮ್ಮ ಯೋಜನೆಗಳೇನು?** ಬೇರೆಯವರ ಕೈಯಲ್ಲಿ ಇರುವ ನಮ್ಮ ತಾಯಿಯನ್ನು ಬಿಡುಗಡೆ ಮಾಡುವುದು. ನಮ್ಮ ಮುಂದಿನ ಗುರಿ, ಭಾರತಮಾತೆಯ ಋಣವನ್ನು ಟಿಬೆಟ್ ಜನಾಂಗವಿರುವ ತನಕ ಮರೆಯುವುದಿಲ್ಲ.

ಟಿಬೆಟಿಯನ್ನರು ಬಂದು ೫೦ ವರ್ಷಗಳಾದರೂ ಭಾರತ ಸರ್ಕಾರ ಅವರಿಗೆ ಯಾವುದೇ ಹಕ್ಕು ಬಾಧ್ಯತೆಗಳನ್ನು ನೀಡಿಲ್ಲ. ಕೆಲವು ಶ್ರೀಮಂತ ಟಿಬೆಟಿಯನ್ನರಿಗೆ ಪೌರತ್ವ ಸಿಕ್ಕಿದೆ. ಅಂತೆಯೇ ಕೊಂಗ್ವ ಜಾತಿಯವನಾದ ವಂಗೆ ಎಂಬುವನ ಮಗನಿಗೆ ಮತಚಲಾಯಿಸುವ ಹಕ್ಕಿದೆ. ಇವನು ಪ್ರತಿ ಮತದಾನ ಸಂದರ್ಭದಲ್ಲೂ ಮತಗಟ್ಟೆಗೆ ಬಂದು ಮತ ಚಲಾಯಿಸುತ್ತಾನೆ. ಕೆಲವು ವರ್ಷಗಳ ಹಿಂದೆ ರಾಜಕೀಯ ಹಕ್ಕಿಗಾಗಿ ಇವರು ಬೇಡಿಕೆಯನ್ನು ಮುಂದಿಟ್ಟಿದ್ದರು. ಭಾರತದ ಪ್ರಜೆಯಾಗಬೇಕು, ಪೌರತ್ವ ಪಡೆಯಬೇಕು ಎಂಬ ಛಲದಿಂದ ಭಾರತೀಯ ಸ್ತ್ರೀ ಹಾಗೂ ಟಿಬೆಟಿಯನ್ ಪುರುಷ,

೧. ಪ್ರಪಂಚದ ಮೇಲ್ಛಾವಣಿ ಟಿಬೆಟ್, ಲೇಖಕರು: ಎಚ್.ಸಿ.ಲೋಹಿತಾಶ್ವ, ಪುಟ. ೬೬.

ಭಾರತೀಯ ಪುರುಷ ಹಾಗೂ ಟಿಬೆಟಿಯನ್ ಸ್ತ್ರೀಯರೊಡನೆ ವಿವಾಹವೂ ಕೂಡ ನಡೆಯುತ್ತಿದೆ. ಇದರಿಂದಾಗಿ ಭಾರತದ ಪೌರತ್ವ ಪಡೆಯುವ ಹಂಬಲ ಅವರದ್ದಾಗಿದೆ.

ನಿರಾಶ್ರಿತರಾಗಿ ನೆಲೆಸಿದ ಟಿಬೆಟಿಯನ್ನರ ಸಾಂಸ್ಕೃತಿಕತೆಯ ಹೊಂಬೆಳಕನ್ನು ಹರಿಸಿ ಪ್ರವಾಸಿಗರ ಮನಸೂರೆಗೊಂಡಿರುವ ಸನ್ನಿವೇಶವನ್ನು ಇಂದು ನೀವು ಕಾಣಬಹುದಾಗಿದೆ.

# ಉಪಸಂಹಾರ

**ಯಾವುದೇ** ಒಬ್ಬ ವಿದ್ವಾಂಸರಾಗಲೀ, ಸಂಶೋಧಕರಾಗಲೀ ಅಥವಾ ವಿದ್ಯಾರ್ಥಿಯಾಗಲೀ ಅವರಿಗೆ ಕ್ಷೇತ್ರಕರ್ತನಿಗೆ ಲೌಕಿಕ ಮತ್ತು ಭೌತಿಕ ಕ್ಷೇತ್ರದಲ್ಲಿ ವಿಷಯಗಳು ಲಭಿಸುತ್ತವೆ. ವಿಜ್ಞಾನಿಯಾದವನು ಯಂತ್ರೋಪಕರಣಗಳನ್ನು ಬಳಸಿ ವಸ್ತುಗಳನ್ನು ಬಳಸಿಕೊಂಡು ನಾಲ್ಕು ಗೋಡೆಯ ಮಧ್ಯೆ ವಿಷಯಗಳ ಪರಿಣತಿಯನ್ನು ಪಡೆಯುತ್ತಾನೆ. ಅಂತೆಯೇ ಕ್ಷೇತ್ರದ ಕಾರ್ಯಕರ್ತನಿಗೆ ಕ್ಷೇತ್ರ ಪ್ರಯೋಗಶಾಲೆಯಾಗುತ್ತದೆ. ಅದು ಒಂದು ಸಮಾಜವಾಗಬಹುದು. ಒಂದು ಗ್ರಾಮದ ಅಧ್ಯಯನವಾಗಿರಬಹುದು ಅಥವಾ ಒಂದು ಜನಾಂಗದ ಅಧ್ಯಯನವಾಗಿರಬಹುದು. ಇದರಲ್ಲಿ ಬೌದ್ಧಧರ್ಮದ ಅನುಯಾಯಿಗಳಾದ ಟಿಬೆಟಿಯನ್ನರಿಗೆ ಸಂಬಂಧಿಸಿದ "ಬೈಲುಕುಪ್ಪೆ-ಟಿಬೆಟಿಯನ್ನರು ಒಂದು ಸಾಂಸ್ಕೃತಿಕ ಅಧ್ಯಯನ" ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಈ ಕ್ಷೇತ್ರಕಾರ್ಯ ನಿಬಂಧವನ್ನು ಸಿದ್ಧಪಡಿಸಲಾಗಿದೆ.

ಅತ್ಯಲ್ಪ ಅವಧಿಯಲ್ಲಿ ಮಹೋನ್ನತ ಸಾಧನೆ ಮಾಡಿರುವ ಬೈಲುಕುಪ್ಪೆ ಟಿಬೆಟಿಯನ್ನರು ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ ಹಾಗೂ ಸಾಮಾಜಿಕವಾಗಿ ಪ್ರಭಾವ ಬೀರಿದ್ದಾರೆ. ಒಂದು ಕಾಲದಲ್ಲಿ ನಿರಾಶ್ರಿತರಾಗಿದ್ದ ಇವರು ಆಶ್ರಯಪಡೆದು ತಮ್ಮದೇ ಆದ ಸ್ಥಾನವನ್ನು ಭದ್ರಪಡಿಸಿಕೊಂಡು ಮಹತ್ತರ ಸಾಧನೆಯನ್ನು ಮಾಡಿದ್ದಾರೆ.

ನೆಲೆಯಿಲ್ಲದೇ ಪರದಾಡುತ್ತಿದ್ದ ಟಿಬೆಟಿಯನ್ನರಿಗೆ ಭಾರತವು ಆಶ್ರಯವನ್ನು ನೀಡಿತು. ಅದಕ್ಕೆ ತಕ್ಕುದಾಗಿ ಟಿಬೆಟಿಯನ್ನರು ಕಾಡಾಗಿದ್ದ ಪ್ರದೇಶವನ್ನು ಒಂದು ನಾಡಾಗಿ ಮಾಡಲಿಲ್ಲ. ಬದಲಿಗೆ ಒಂದು ಪ್ರೇಕ್ಷಣೀಯ ಸ್ಥಳವನ್ನಾಗಿ ಮಾಡಿದುದು ಹೆಗ್ಗಳಿಕೆಯಾಗಿದೆ. ಅವರು ನಮ್ಮ ಭಾರತೀಯರ ಜೊತೆ ಬೆರೆತು ಅಂದರೆ ಬರೀ ಬಾಂಧವ್ಯವನ್ನು, ಸ್ನೇಹ-ಸೌಹಾರ್ದತೆಯನ್ನು ಮಾತ್ರ ಇಟ್ಟುಕೊಳ್ಳದೇ ಅದರ ಜೊತೆಗೆ ಭಾರತೀಯರ ಜೊತೆ ಪ್ರೇಮ ಸಂಬಂಧವನ್ನು ಇಟ್ಟುಕೊಂಡರು. ಇವರಿಂದ ಲಾಭ-ನಷ್ಟ ಎರಡೂ ಕೂಡ ಒಟ್ಟೊಟ್ಟಿಗೆ ಆಗಿರುವುದನ್ನು ನೋಡಬಹುದಾಗಿದೆ. ಇವರು ಭಾರತೀಯರು ನಮಗೆ ಆಶ್ರಯಕೊಟ್ಟಿದ್ದಾರೆ. ಅದರ ಋಣವನ್ನು ನಾವು ತೀರಿಸಬೇಕಾದರೆ ನಾವು ಅವರ ಜೊತೆ ಮದುವೆ ಎನ್ನುವ ಮಧುರ ಸಂಬಂಧವನ್ನು ಇಟ್ಟುಕೊಳ್ಳೋಣ ಎನ್ನುವ ಮಹತ್ವದ ಉದ್ದೇಶ ಅವರಲ್ಲಿರಲಿಲ್ಲ. ಅವರಿಗೆ ಇದ್ದದ್ದು ಒಂದೇ ಉದ್ದೇಶ. ಭಾರತೀಯ ಪೌರತ್ವವನ್ನು ಪಡೆದುಕೊಳ್ಳಬೇಕೆಂಬ ಮಹಾದಾಸೆ. ಅದಕ್ಕಾಗಿಯೇ ಅವರು ಮದುವೆಯ ನೆಪದಲ್ಲಿ ಭಾರತೀಯರ ಜೊತೆ ಅವರು ಬೆರೆತಿದ್ದಾರೆ. ಭಾಷೆ ಬೇರೆ ಬೇರೆ, ಉಡುಗೆ-ತೊಡುಗೆ ಬೇರೆ ಬೇರೆ, ಆಹಾರ ಪದ್ಧತಿ ಬೇರೆ ಬೇರೆ, ಸಂಸ್ಕೃತಿಯೇ ಬೇರೆ. ಆದರೂ ಸಹ ಭಾರತೀಯರು ಮತ್ತು

ಟಿಬೆಟಿಯನ್ನರ ನಡುವೆ ಮದುವೆ ಎನ್ನುವ ಅತಿ ಅಮರವಾದ ಸಂಬಂಧ ಜೋಡಿಯಾಗಿ ಇಲ್ಲಿ ಜೀವಂತವಾಗಿ ನೆಲೆನಿಂತಿದೆ. ನಮ್ಮ ಭಾರತೀಯರಲ್ಲಿ ಮದುವೆಗೆ ಅಪಾರವಾದ ಬೆಲೆ, ನಂಬಿಕೆ ಇದೆ. ಅದರಲ್ಲೂ ಹೆಣ್ಣುಮಕ್ಕಳಿಗೆ ಸಂಪ್ರದಾಯ, ಆಚಾರ, ರೀತಿ-ನೀತಿಗಳು ಕಟ್ಟುನಿಟ್ಟಾಗಿವೆ. ಆದರೂ ಸಹ ಭಾರತೀಯರು ಮತ್ತು ಟಿಬೆಟಿಯನ್ನರ ನಡುವೆ ಅನ್ಯೂನ್ಯ ಸಂಬಂಧವಿದೆ. ಭಾರತೀಯರಲ್ಲಿ ಸಪ್ತಪದಿ ತುಳಿಯುವುದೆಂದರೆ ಎಲ್ಲಿಲ್ಲದ ಗೌರವ, ಅಪಾರವಾದ ನಂಬಿಕೆ. ಮದುವೆ ಎಂಬುದು ಪವಿತ್ರವಾದ ಸಂಕೇತ. ಆದರೆ ಟಿಬೆಟಿಯನ್ನರಲ್ಲಿ ಮದುವೆಗೆ ಅಷ್ಟು ಪ್ರಾಶಸ್ತ್ಯವಿಲ್ಲ. ಒಂದು ಹೆಣ್ಣು ಎರಡು ಮದುವೆಯಾಗಬಹುದು. ಆದರೆ ಭಾರತೀಯರಲ್ಲಿ ಒಂದು ಹೆಣ್ಣು ಒಬ್ಬರನ್ನು ಮದುವೆಯಾದ ಮೇಲೆ ಅವಳ ಗಂಡ ಮದುವೆಯಾದ ನಾಳೆಗೆ ಸತ್ತರೂ ಜೀವನಪೂರ್ತಿ ಒಬ್ಬಳೇ ಬದುಕಬೇಕೆನ್ನುವ ಪದ್ಧತಿ ಇದೆ. ಸಂಸ್ಕೃತಿಯಲ್ಲಿ ನಮಗೂ ಟಿಬೆಟಿಯನ್ನರಿಗೂ ಅಜಗಜಾಂತರ ವ್ಯತ್ಯಾಸವಿದೆ. ಹೀಗಿದ್ದರೂ ಸಹ ಭಾರತ ಮತ್ತು ಟಿಬೆಟಿಯನ್ನರು ತುಂಬಾ ಹತ್ತಿರ ಸಂಬಂಧವನ್ನು ಹೊಂದಿರುವುದು, ಅದರಲ್ಲೂ ಮದುವೆ ಆಗುತ್ತಿರುವುದು ತುಂಬಾ ಆಶ್ಚರ್ಯಕರವಾಗಿದ್ದರೂ ಸತ್ಯವಾಗಿದೆ. ಭಾಷೆ ಬೇರೆ ಬೇರೆ ಆದರೂ ಅವರು ಕನ್ನಡವನ್ನು ಕಲಿತು ಇಲ್ಲಿ ನೆಲೆನಿಂತು ತಮ್ಮ ಕೃತಜ್ಞತೆಯನ್ನು ಸಲ್ಲಿಸಿದ್ದಾರೆ. ಮರೆಯಲಾಗದ ಮಧುರ ಸಂಬಂಧ ಭಾರತೀಯರು ಮತ್ತು ಟಿಬೆಟಿಯನ್ನರ ನಡುವೆ ಇದೆ. ಭಾಷೆಯೇ ಗೊತ್ತಿಲ್ಲದೇ ಜೀವನ ಮಾಡೋದು ಸುಲಭದ ಮಾತಲ್ಲ. ಆದರೂ ಇವರಿಬ್ಬರ ನಡುವೆ ಅವಿನಾಭಾವ ಸಂಬಂಧವಿದೆ. ಯುವಜನರನ್ನು ಟಿಬೆಟಿಯನ್ನರು ಹಾಳು ಮಾಡಿದರೆನ್ನುವುದರಲ್ಲಿ ಸಂದೇಹವಿಲ್ಲ.

ಹೀಗೆ ಆಶ್ರಯ ಪಡೆದ ಟಿಬೆಟಿಯನ್ನರು ನಮ್ಮ ಜನರ ಜೊತೆ ಬೆರೆತು ಅಲ್ಲಿಗೆ ಹೋದವರಿಗೆ ಉತ್ತಮ ಮಾಹಿತಿಯನ್ನು ನೀಡುತ್ತಾರೆ.

ಇಲ್ಲಿ ಬೈಲುಕುಪ್ಪೆ ಟಿಬೆಟಿಯನ್ನರ ಆಗಮನದಿಂದ ಹಿಡಿದು ಇಂದಿನ ಪರಿಸ್ಥಿತಿಯವರೆಗೆ ಇಲ್ಲಿ ಆರು ಅಧ್ಯಾಯಗಳನ್ನು ಬರೆದಿದ್ದೇನೆ. ಮೊದಲನೆಯ ಅಧ್ಯಾಯದಲ್ಲಿ ಬೈಲುಕುಪ್ಪೆ ಗ್ರಾಮದ ಭೌಗೋಳಿಕ ಮತ್ತು ಐತಿಹಾಸಿಕ ಹಿನ್ನೆಲೆಯ ಬಗ್ಗೆ ತಿಳಿಸಿದ್ದೇನೆ. ಹಾಗೆಯೇ ಎರಡನೆಯ ಅಧ್ಯಾಯದಲ್ಲಿ ಭಾರತ ಮತ್ತು ಟಿಬೆಟ್ ನಡುವಿನ ಸಾಂಸ್ಕೃತಿಕ ಮತ್ತು ಧಾರ್ಮಿಕ ಸಂಬಂಧ ಯಾವ ರೀತಿ ಇತ್ತು ಎಂಬುದರ ಬಗ್ಗೆ ವಿವರಿಸಿದ್ದೇನೆ. ಮೂರನೆಯ ಅಧ್ಯಾಯದಲ್ಲಿ ಟಿಬೆಟಿಯನ್ನರು ಯಾವ ರೀತಿ ಇಲ್ಲಿಗೆ ಬಂದರು. ಅಂದರೆ ಅವರ ಆಗಮನದ ಇತಿಹಾಸದ ಬಗ್ಗೆ ವಿವರಣೆ ನೀಡಿದ್ದೇನೆ. ಇಷ್ಟೇ ಅಲ್ಲದೇ ಆ ಸಂದರ್ಭದಲ್ಲಿ ಪರಿಸ್ಥಿತಿ, ಸಾಮಾಜಿಕ ಸ್ಥಿತಿಯನ್ನು ತಿಳಿಸಿದ್ದೇನೆ. ಹಾಗೆಯೇ ನಾಲ್ಕನೆಯ ಅಧ್ಯಾಯದಲ್ಲಿ ಟಿಬೆಟಿಯನ್ನರು ಬೈಲುಕುಪ್ಪೆಯನ್ನು

ಸಾಂಸ್ಕೃತಿಕವಾಗಿ ಬೆಳೆಸಿ ಜಗತ್ತಿನ ಪ್ರವಾಸ ತಾಣಗಳಲ್ಲಿ ಒಂದಾಗಿ ರೂಪಿಸಿದ ವಿವರಗಳನ್ನು ನೀಡಿದ್ದೇನೆ.

ಐದನೆಯ ಅಧ್ಯಾಯದಲ್ಲಿ ಬೈಲುಕುಪ್ಪೆ ಟಿಬೆಟಿಯನ್ನರ ಧಾರ್ಮಿಕ ಆಚರಣೆ ಮತ್ತು ಸಂಪ್ರದಾಯದ ಬಗ್ಗೆ ವಿವರಿಸಿದ್ದೇನೆ. ಇದಲ್ಲದೇ ಈ ಅಧ್ಯಾಯದಲ್ಲಿ ಉಪಶೀರ್ಷಿಕೆಗಳನ್ನು ಮಾಡಿದ್ದೇನೆ. ಅವುಗಳೆಂದರೆ ಟಿಬೆಟಿಯನ್ನರ ಆಚಾರವಿಚಾರಗಳು, ಊಟೋಪಚಾರ ವಿಧಾನ, ಉಡುಗೆ-ತೊಡುಗೆ, ಧಾರ್ಮಿಕ ವಿಚಾರಗಳು, ಅವರು ಆಚರಿಸಿರುವ ಹಬ್ಬಗಳು ಮತ್ತು ವಿಶೇಷ ದಿನಗಳ ಬಗ್ಗೆ ಪ್ರಸ್ತಾಪಿಸಿದ್ದೇನೆ. ಆರನೆಯ ಅಧ್ಯಾಯದಲ್ಲಿ ಟಿಬೆಟಿಯನ್ನರ ಭಾಷೆ ಮತ್ತು ಲಿಪಿ ಹಾಗೂ ಅವರ ಇಂದಿನ ಪರಿಸ್ಥಿತಿಯನ್ನು ಕುರಿತು ತಿಳಿಸಿದ್ದೇನೆ.

ಬೈಲುಕುಪ್ಪೆ ಟಿಬೆಟಿಯನ್ನರನ್ನು ಕುರಿತು ಸಮಗ್ರವಾಗಿ ಅಧ್ಯಯನ ಮಾಡಲಾಗದೇ ಹೋದರೂ ಅಲ್ಲಿನ ಭೌಗೋಳಿಕ, ಐತಿಹಾಸಿಕ ಹಿನ್ನೆಲೆ, ಇವೆರಡರ ನಡುವಿನ ಸಾಂಸ್ಕೃತಿಕ ಮತ್ತು ಧಾರ್ಮಿಕ ಸಂಬಂಧ, ಅವರ ಧಾರ್ಮಿಕ ಆಚರಣೆ ಮತ್ತು ಸಂಪ್ರದಾಯ, ಅವರ ಆಚಾರ-ವಿಚಾರಗಳು, ಉಡುಗೆ-ತೊಡುಗೆಗಳು, ಊಟೋಪಚಾರ ವಿಧಾನ, ಸಾಂಸ್ಕೃತಿಕತೆಗಳ ಬಗ್ಗೆ ತಿಳಿಸುವ ಪ್ರಯತ್ನ ಈ ನಿಬಂಧದಲ್ಲಿ ಮಾಡಲಾಗಿದೆ.

# ಅನುಬಂಧಗಳು

## ಅ) ಗ್ರಂಥಸೂಚಿ


೧) ಶಿವಸಂಪದ, ಪ್ರಧಾನ ಸಂಪಾದಕರು: ಡಾ.ಪಿ.ಕೆ.ರಾಜಶೇಖರ, ಕನ್ನಡ ಪ್ರಾಧ್ಯಾಪಕರು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು.

೨) ಪ್ರಪಂಚದ ಮೇಲ್ಛಾವಣಿ ಟಿಬೆಟ್ ಲೇಖಕರು, ಎಚ್.ಸಿ.ಲೋಹಿತಾಶ್ವ ಉಪನ್ಯಾಸಕರು

೩) ಸ್ವರ್ಣ ದೇವಸ್ಥಾನ (Golden Temple) ಕನ್ನಡಕ್ಕೆ ಅನುವಾದ ಡಿ.ಎನ್. ಪುರುಷೋತ್ತಮರಾವ್, ಅಧ್ಯಾಪಕರು, ಸೆಂಟ್ರಲ್ ಸ್ಕೂಲ್‌ಫಾರ್ ಟಿಬೆಟನ್ಸ್, ಬೈಲುಕುಪ್ಪೆ

೪) ಬೈಲುಕುಪ್ಪೆ ಟಿಬೆಟಿಯನ್ನರ ಒಂದು ಸಾಂಸ್ಕೃತಿಕ ಅಧ್ಯಯನ, ಎನ್.ಆರ್. ಚಂದ್ರೇಗೌಡ, ಅತಿಥಿ ಕನ್ನಡ ಉಪನ್ಯಾಸಕರು, ವಿದ್ಯಾವರ್ಧಕ ಪ್ರಥಮ ದರ್ಜೆ ಕಾಲೇಜು, ಮೈಸೂರು

೫) 'ಬೈಲುಕುಪ್ಪೆ ಟಿಬೆಟಿಯನ್ನರ ಒಂದು ಅಧ್ಯಯನ' ಹೆಚ್.ಎನ್.ರಾಮಕೃಷ್ಣ, ಕನ್ನಡ ಶಿಕ್ಷಕರು ಹರದೂರು, ಪಿರಿಯಾಪಟ್ಟಣ ತಾಲ್ಲೂಕು

## ಆ) ವಕ್ತೃ ಪರಿಚಯ

| ಕ್ರ.ಸಂ. | ಹೆಸರು | ವಯಸ್ಸು | ವೃತ್ತಿ | ಭೇಟಿ ಮಾಡಿದ ದಿನಾಂಕ |
|---|---|---|---|---|
| ೧ | ಕುಂಗ್‌ತ್ಸೋವಾ ಬೈಲುಕುಪ್ಪೆ | ೬೩ | ಟಿಬೆಟಿಯನ್ನರ ಬಗ್ಗೆ ತಿಳಿಸುವ ಮಾರ್ಗದರ್ಶಕ | ೮-೪-೨೦೧೧ |
| ೨ | ಚಿಯಾಂಗ್ ಪೋಚ್ ಬೈಲುಕುಪ್ಪೆ | ೪೫ | ಬೌದ್ಧಭಿಕ್ಷು | ೮-೪-೨೦೧೧ |
| ೩ | ಚಿನ್‌ತ್ಸುಂಗ್ ಬೈಲುಕುಪ್ಪೆ | ೪೬ | ವ್ಯಾಪಾರಸ್ಥರು | ೮-೪-೨೦೧೧ |
| ೪ | ಮಾದಮ್ಮ ಕೊಪ್ಪ | ೬೭ | ತರಕಾರಿ ವ್ಯಾಪಾರ | ೨೧-೪-೨೦೧೧ |
| ೫ | ಮಂಜು ಕೊಪ್ಪ | ೩೫ | ಆಟೋಚಾಲಕ | ೨೧-೪-೨೦೧೧ |
| ೬ | ರಮೇಶ್ ದೊಡ್ಡ ಹರವೆ | ೨೬ | ವ್ಯಾನ್‌ಚಾಲಕ | ೨೮-೪-೨೦೧೧ |
| ೭ | ದೊಡ್ಡ ಭೈರನಾಯಕ್ ದೊಡ್ಡಹರವೆ | ೬೧ | ವ್ಯವಸಾಯ | ೨೮-೪-೨೦೧೧ |
| ೮ | ಎಚ್.ಸಿ.ಲೋಹಿತಾಶ್ವ | ೫೬ | ಉಪನ್ಯಾಸಕರು | ೨೯-೪-೨೦೧೧ |



೧. ದಲೈಲಾಮಾ – ಟಿಬೆಟಿಯನ್ನರ ನಾಯಕ ಮತ್ತು ಧರ್ಮಗುರು



೨. ನಾಮ್‌ಡ್ರೋಲಿಂಗ್ ಬೌದ್ಧವಿಹಾರ (ಈ ದೇವಾಲಯದ ಒಳಗೋಡೆಯಲ್ಲಿರುವ ಕಲಾಕೃತಿಗಳು: ಬುದ್ಧನ ಅಕ್ಕಪಕ್ಕದಲ್ಲಿ ಪದ್ಮಸಂಭವ ಮತ್ತು ಅಮಿತಾಯುಷರ ಮೂರ್ತಿಗಳು.



೩. ಸ್ವರ್ಣದೇವಸ್ಥಾನ/ಪದ್ಮಸಂಭವ ಬೌದ್ಧವಿಹಾರ : ಟಿಬೆಟ್ ದೇಶದ ಸಂಪ್ರದಾಯಕ್ಕನುಗುಣವಾಗಿವೆ.



೪. ಸಂದುಪುರಿ ಮೊನಾಸ್ಟರಿ –(The new Golden Temple) ಇದು ಮಹಾದ್ವಾರವಾಗಿದೆ.



**H.H. PENOR RINPOCHE**

೫. H.H. PENOR RINPOCHE ಇವರು ಟಿಬೆಟಿಯನ್ನರ ಪರಮಪೂಜ್ಯರು.



೬. ಗೆಲ್ಸಿಂದೀಜಿ – Golden Templeನ ರಕ್ಷಕ ಅಥವಾ ಕಾವಲು ಕಾಯುವವನು.



7. Yeshe Wodsal Sherab Raldriling Jr. High School - ಇಲ್ಲಿ ಲೆನ್‌ತ್ಸ ಭಾಷೆ, ಟಿಬೆಟಿಯನ್ ಚರಿತ್ರೆ ಮೊದಲಾದ ಪುಸ್ತಕಗಳನ್ನು ವ್ಯಾಸಂಗ ಮಾಡುತ್ತಾರೆ.

8. Tshepal Thopvey Hospital - ಆರೋಗ್ಯ ಪಾಲನೆಮಾಡುವ ಬೃಹತ್‌ಪ್ರಮಾಣದ ಆಸ್ಪತ್ರೆ

ಛಾಯಾಚಿತ್ರಗಳು




೯. ಛಾಯಾಚಿತ್ರಗಳು : ಬೈಲುಕುಪ್ಪೆ ಟಿಬೆಟಿನ ಒಂದು ಪಕ್ಷಿನೋಟ ಇಲ್ಲಿದೆ.



೧೦. ZANGDOG PALRI: ಪ್ರಾರ್ಥನೆ ಮಾಡುವ ಮಂದಿರ.



೧೧. ಸೆರಾ ಮೊನಾಸ್ಟರಿ : ಇದು ಮಠವಾಗಿದೆ ಮತ್ತು ಬೌದ್ಧವಿಹಾರ ಕೂಡ.



೧೨. ಆನೆಗುಂಬ ಕಾಲೇಜು : ಉತ್ತಮ ಲೈಬ್ರರಿ ಮತ್ತು KAGYU NALANDA OFFICE ಇದೆ.



[ಸ್ತೂಪ]

೧೩. ಸ್ಟುಪ : ಪ್ರದಕ್ಷಿಣೆ ಹಾಕುವ ವಿಗ್ರಹ ಇದಾಗಿದೆ.



೧೪. ಸಖ್ಯಾಪ ಮೊನಾಸ್ಟರಿ : ಇದು ಬೌದ್ಧವಿಹಾರವಾಗಿದೆ.